ಕನ್ನಡ ಕಾವ್ಯಮಾಲೆ — ೧೨

# ನನ್ನ ದೇವರು
ಮತ್ತು
# ಇತರ ಕಥೆಗಳು

ಕೆ. ವಿ. ಪುಟ್ಟಪ್ಪ



ಶಿವಮೊಗ್ಗ
ಕಾವ್ಯಾಲಯ
೧೯೪೦

# ವಿವರ*



* [ಇವುಗಳಲ್ಲಿ ನಾಲ್ಕು ಕಥೆಗಳು 'ಪ್ರಬುದ್ಧ ಕರ್ಣಾಟಕ'ದಲ್ಲಿಯೂ, ಒಂದು 'ಕಾಮನಬಿಲ್ಲಿ'ನಲ್ಲಿಯೂ, ಉಳಿದ ಮೂರು 'ವಿಚಾರವಾಹಿನಿ'ಯಲ್ಲಿಯೂ ಈ ಮೊದಲು ಪ್ರಕಟವಾಗಿವೆ.]

# ಕೆ. ವಿ. ಪುಟ್ಟಪ್ಪನವರ ಕೃತಿಗಳು

**ಕವನ ಸಂಗ್ರಹಗಳು:**

ಬೊಮ್ಮನಹಳ್ಳಿಯ ಕಿಂದರಿಜೋಗಿ
ಕಿಂದರಿಜೋಗಿ, ಇತರ ಕಥನ ಕವನಗಳು
ಚಿತ್ರಾಂಗದಾ (ಮಹಾಕಾವ್ಯ)
ಪಾಂಚಜನ್ಯ
ನವಿಲು: ಎರಡು ಭಾಗಗಳು

**ನಾಟಕಗಳು:**

ಯಮನ ಸೋಲು
ನನ್ನ ಗೋಪಾಲ
ವಾಲ್ಮೀಕಿಯ ಭಾಗ್ಯ
ಮಹಾರಾತ್ರಿ
ಜಲಗಾರ
ಶ್ಮಶಾನ ಕುರುಕ್ಷೇತ್ರಂ
ಬಿರುಗಾಳಿ
ರಕ್ತಾಕ್ಷಿ

**ಕಥೆ, ಕಾದಂಬರಿ, ಚಿತ್ರಗಳು:**

ಸಂನ್ಯಾಸಿ ಮತ್ತು ಇತರ ಕಥೆಗಳು
ನನ್ನ ದೇವರು ಮತ್ತು ಇತರ ಕಥೆಗಳು
ಮಲೆನಾಡಿನ ಚಿತ್ರಗಳು
ಕಾನೂರು ಸುಬ್ಬಮ್ಮ ಹೆಗ್ಗಡಿತಿ (ಕಾದಂಬರಿ: ೮ ಭಾಗಗಳು)

**ಜೀವನ ಚರಿತೆ:**

ಸ್ವಾಮಿ ವಿವೇಕಾನಂದ
ಶ್ರೀ ರಾಮಕೃಷ್ಣಪರಮಹಂಸ

**ಇತರ ಪುಸ್ತಕಗಳು:**

ಸಾಹಿತ್ಯಪ್ರಚಾರ
ವೇದಾಂತ
ವಿವೇಕವಾಣಿ
ಕಾವ್ಯದ ಕಣ್ಣು ಕವಿಯ ದರ್ಶನದಲ್ಲಿ
ಹೊಸ ಸಾಹಿತ್ಯ ಮತ್ತು ಹೊಸ ದೃಷ್ಟಿ

---

**ಗ್ರಂಥಗಳು ದೊರೆಯುವ ಸ್ಥಳ**

**ಕಾವ್ಯಾಲಯ** **ಶಿವಮೊಗ್ಗ**

# ನನ್ನ ದೇವರು

ನನ್ನ ಪತಿ ವಿಷಮಶೀತಜ್ವರದಿಂದ ಹದಿನೈದು ದಿನಗಳು ಹಗಲೂ ಇರುಳೂ ನರಳಿದರು. ನಾನು ಮೊದಮೊದಲು ನವವಧುವಿಗೆ ಪತಿಯೆದುರು ನಾಚಿಗೆಯಿಂದಿರುವುದು ಭೂಷಣವೆಂದು ದೂರವಾಗಿಯೇ ಇದ್ದುಕೊಂಡು ಅವರಿಗೆ ಬೇಕಾದ ಅನ್ನಪಾನಾದಿ ಪಥ್ಯಗಳನ್ನು ಒದಗಿಸುತ್ತಿದ್ದೆ. ಕಡೆಗೆ ರೋಗ ಪ್ರಬಲವಾಗಲು ಉದ್ವೇಗ ನಾಚಿಗೆಯನ್ನು ತೊಡೆದುಬಿಟ್ಟಿತು. ಪತಿಯ ಬಳಿ ಕುಳಿತು ಶುಶ್ರೂಷೆ ಮಾಡಬೇಕೆಂದು ಎದೆ ತುಡಿಯ ತೊಡಗಿತು. ನಾನೇ ಅವರ ಪಕ್ಕದಲ್ಲಿದ್ದುಕೊಂಡು ಶುಶ್ರೂಷೆ ಮಾಡಿದರೆ ಅವರ ಕಾಯಿಲೆ ಬೇಗ ಗುಣವಾಗುವುದೆಂದು ಎದೆಯಾರೆ ಭಾವಿಸಿ ನಂಬಿದೆ. ಒಂದೆರಡು ದಿನ ಒಬ್ಬಳೇ ಒಂದು ಮೂಲೆಯಲ್ಲಿ ಕುಳಿತು ಕೊಂಡು ಅತ್ತು ಅತ್ತು ಈಶ್ವರನನ್ನು ಪ್ರಾರ್ಥಿಸಿದೆ. ಸ್ವಲ್ಪವೂ ವಂಚನೆ ಯಿಲ್ಲದೆ ದೃಢಭಕ್ತಿಯಿಂದ ಪ್ರಾರ್ಥಿಸಿದೆ. ಆದರೆ ಕಾಯಿಲೆ ಇನ್ನೂ ಉಗ್ರಸ್ಥಿತಿಗೇರಿತು.

ನಮ್ಮ ಭಾವನವರು ತಮ್ಮನ ಬಳಿಯೇ ಮೂರು ಹೊತ್ತೂ ಕುಳಿತು ಶುಶ್ರೂಷೆ ಮಾಡುತ್ತಿದ್ದರು. ನನ್ನ ಪತಿಯನ್ನು ನೋಡಲು ಬಂದ ಬಾಂಧವರಿಗೆ ಸಮಾಧಾನ ಹೇಳುತ್ತಿದ್ದರು. ಆದರೆ ಇತರರಾರೂ ಬಳಿ ಯಿಲ್ಲದಿದ್ದಾಗ ಅವರು ನನ್ನ ಪತಿಯ ತಲೆಯೆಡೆ ಮೌನವಾಗಿ ಕುಳಿತು ದೀರ್ಘವಾಗಿ ಚಿಂತಿಸುತ್ತಿದ್ದುದನ್ನು ನಾನು ಮರೆಯಲ್ಲಿ ನಿಂತು ನೋಡು ತ್ತಿದ್ದೆ. ಆಗ ನನಗೆ ಬಹಳ ಭಯವಾಗುತ್ತಿತ್ತು.

ಒಂದು ದಿನ ಮಧ್ಯಾಹ್ನ. ನಂಟರೆಲ್ಲರೂ ಊಟಮಾಡಲು ಹೋಗಿದ್ದರು. ಆದರೆ ಭಾವನವರು ಮಾತ್ರ ರೋಗಿಯ ಬಳಿ ಕುಳಿತು 'ಡಿಗ್ರಿ' ಇಟ್ಟು ನೋಡುತ್ತಿದ್ದರು. ನೋಡಿ ಸ್ವಲ್ಪ ಸುಯ್ದರು. ನಾನು

ದೂರ ಒಂದು ಮುಂಡಿಗೆಯ ಮರೆಯಲ್ಲಿ ನಿಂತು ಎಲ್ಲವನ್ನೂ ನೋಡು ತ್ತಿದ್ದೆ. ಭಾವನವರು ಏನು ಯೋಚಿಸಿದರೋ, ನನ್ನನ್ನು ಹೆಸರು ಕೂಗಿ ಕರೆದರು.

ಅವರು ಎಂದೂ ನನ್ನೊಡನೆ ಮಾತಾಡಿರಲಿಲ್ಲ. ನನ್ನ ಹೆಸರನ್ನೂ ಕೂಗಿ ಕರೆದವರಲ್ಲ. ಆ ದಿನ ಕರೆದರು. ನಾನು ಕಣ್ಣೀರು ಒರಸಿ ಕೊಳ್ಳುತ್ತ ಅವರ ಬಳಿ ಹೋದೆ. ಅವರು "ಸ್ವಲ್ಪ ಇಲ್ಲೇ ಕುಳಿತು ಕೊಂಡಿರಮ್ಮ, ನಾನೀಗ ಬರುತ್ತೇನೆ" ಎಂದು ಸ್ನಾನದ ಮನೆಗೆ ಹೋದರು. ಪತಿಯ ಬಳಿ ನಾನೊಬ್ಬಳೇ ಕುಳಿತಿದ್ದೆ. ಅಂಗಳದಲ್ಲಿ ಬಿಸಿಲು ರೌರವವಾಗಿತ್ತು.

ನಾನೇನೋ ಅವರ ಬಳಿ ಕುಳಿತೆ. ಆದರೆ ಅವರಿಗೆ ಹಿಂದಿನ ದಿನ ದಿಂದ ಮಾತೇ ನಿಂತುಹೋಗಿತ್ತು. ನಾನು ಕುಳಿತು ಅಳುತ್ತಿದ್ದೆ. ಆಗ ಅವರು ಮುಚ್ಚಿದ್ದ ಕಣ್ಣು ತೆರೆದು ನನ್ನ ಕಡೆ ದೀರ್ಘಕಾಲ ನೋಡಿ ದರು. ನನಗೆ ದುಃಖ ಇಮ್ಮಡಿಯಾಯಿತು. ಬಿಕ್ಕಿಬಿಕ್ಕಿ ಅಳುತ್ತ ಅವರನ್ನೇ ನೋಡುತ್ತಿದ್ದೆ. ಅವರ ಕಣ್ಣಿನಿಂದಲೂ ಎರಡು ಹನಿ ತುಳುಕಿ ಬಿದ್ದುವು. ಆಮೇಲೆ ನನ್ನನ್ನು ಸಂತವಿಸಲೆಂಬಂತೆ ಬಲಗೈಯನ್ನು ಎತ್ತಲಾರದೆ ಎತ್ತಿ ನನ್ನ ತೊಡೆಯ ಮೇಲಿಟ್ಟು, ಮತ್ತೆ ಹಿಂದಿನಂತೆ ಎವೆಯಿಕ್ಕದೆ ನನ್ನನ್ನು ದೃಷ್ಟಿಸಿದರು. ಆ ದೃಷ್ಟಿಯು ದಿಗಂತಗಾಮಿ ಯಾಗಿತ್ತು. ಅದರಲ್ಲಿ ಅನಂತ ಪ್ರಶ್ನೆಯ ಪ್ರತಿಬಿಂಬವಿತ್ತು.

ಅಂತೂ ಅಂದಿನಿಂದ ಅವರ ಬಳಿಯಿದ್ದುಕೊಂಡೇ ಶುಶ್ರೂಷೆ ಮಾಡ ತೊಡಗಿದೆ. ಅದಕ್ಕಾಗಿ ಮನಸ್ಸಿನಲ್ಲಿಯೇ ನಮ್ಮ ಭಾವನವರನ್ನು ವಂದಿಸಿದೆ.

ಹದಿಮೂರನೆಯ ದಿನ ರಾತ್ರಿ ಕಾಯಿಲೆ ಜೋರಾಯಿತು. ಬಂದ ನಂಟರೆಲ್ಲ ಅಳತೊಡಗಿದರು. ಹುಡುಗಿಯಾದ ನಾನು ಎದೆಯೆದೆ ಬಡಿದುಕೊಂಡು ಅಳತೊಡಗಿದೆ. ಆದರೆ ನಮ್ಮ ಭಾವನವರು ನೀರವ ವಾಗಿ ಕುಳಿತಿದ್ದರು. ರೋಗಿಯ ಶುಶ್ರೂಷೆಯನ್ನು ಮಾತ್ರ ಎಂದಿನಂತೆ ಅನುದ್ವಿಗ್ನಮನಸ್ಕರಾಗಿ ಮಾಡುತ್ತಲೇ ಇದ್ದರು.

ನಮ್ಮ ಹಳ್ಳಿ ಬೆಟ್ಟಕಾಡುಗಳ ನಡುವೆ ಇರುವ ಒಂದೇ ಮನೆ.

ಆಸ್ಪತ್ರೆಯಿರುವುದು ನಾಲ್ಕೈದು ಮೈಲಿಗಳಾಚೆ. ಡಾಕ್ಟರನ್ನು ಕರೆತರಲು ಒಬ್ಬಾಳು ಹೋದನು. ರಾತ್ರಿ ಮೂರು ಗಂಟೆಯ ಹೊತ್ತಿಗೆ ಡಾಕ್ಟರು ಬಂದರು. ಅವರು ಬರಲು ನಮಗೆಲ್ಲ ಧೈರ್ಯವಾಯಿತು. ಸಂಟರೆಲ್ಲ ಅಳುವುದನ್ನು ನಿಲ್ಲಿಸಿದರು. ನಾನೂ 'ಮೆಲ್ಲನೆ' ರೋದಿಸತೊಡಗಿದೆ. ಡಾಕ್ಟರು ರೋಗಿಯನ್ನು ಪರೀಕ್ಷೆಮಾಡಿ ನಮ್ಮ ಭಾವನವರೊಡನೆ ಇಂಗ್ಲೀಷಿನಲ್ಲಿ ಮೃದುಸ್ವರದಿಂದ ಏನನ್ನೋ ಹೇಳಿದರು. ನನಗಿದ್ದ ಭೀತಿ ಮತ್ತೂ ಹೆಚ್ಚಿತು. ಕಡೆಗೆ ಸೂಜಿಮದ್ದು ಕೊಟ್ಟು, ಭಾವನವರೊಡನೆ ಇಂಗ್ಲೀಷಿನಲ್ಲಿಯೇ ಮಾತಾಡಿ ಡಾಕ್ಟರು ಹೊರಟುಹೋದರು.

ಮರುದಿನ ರೋಗ ಇನ್ನೂ ವಿಷಮವಾಯಿತು. ಆ ದಿನವೆಲ್ಲಾ ನನಗೆ ಸೂಜಿಯ ಮೊನೆಯಮೇಲೆ ನಿಂತಂತಿತ್ತು. ಕಡೆಗೆ ಬೈಗಾಯಿತು, ಕತ್ತಲಾಯಿತು. ಕತ್ತಲೆಯೊಡನೆ ಭಯವೂ ರುದ್ರಾಕಾರವನ್ನು ತಾಳಿತು. ರಾತ್ರಿ ಪುನಃ ಡಾಕ್ಟರು ಬಂದರು. ಪತಿಯ ಬಳಿಯಲ್ಲಿಯೇ ಇದ್ದು ಬಹಳ ಮುತುವರ್ಜಿಯಿಂದ ಔಷಧಿ ಪ್ರಯೋಗಮಾಡುತ್ತಿದ್ದರು. ಅರ್ಧರಾತ್ರಿ ಕಳೆಯಿತು. ಕೆಲವರು ಮಲಗಿದರು. ಮತ್ತೆ ಕೆಲವರು ಹತಾಶರಾದಂತೆ ಕುಳಿತಿದ್ದರು. ನಾನು ಪತಿಯ ಪಾದದೆಡೆ ಕುಳಿತು "ಭಗವಂತ, ನನ್ನ ತಾಳಿ ಕಾಪಾಡು" ಎಂದು ಅನನ್ಯಮನಸ್ಕಳಾಗಿ ಬೇಡುತ್ತಿದ್ದೆ. ಸೀಮೆ ಎಣ್ಣೆಯ ಲ್ಯಾಂಪಿನ ಕೆಂಬೆಳಕು ವಿಷಣ್ಣವಾಗಿ ಉರಿಯುತ್ತಿತ್ತು. ಭಾವನವರು ಮುಂಡಿಗೆಗೆ ಒರಗಿಕೊಂಡು ಸುಮ್ಮನೆ ಕುಳಿತಿದ್ದರು.

ಸುಮಾರು ನಾಲ್ಕು ಗಂಟೆಯ ಹೊತ್ತಿನಲ್ಲಿ ಡಾಕ್ಟರು ನಿಟ್ಟುಸಿರು ಬಿಟ್ಟು ಮೇಲೆದ್ದು ನಿಂತರು. ನಮ್ಮ ಭಾವ ನನ್ನನ್ನು ಕರೆದು 'ಬಾಯಿಗೆ ನೀರು ಬಿಡು'ವಂತೆ ಹೇಳಿದರು. ನಾನು ಅಯ್ಯೋ ಎಂದು ಒರಲುತ್ತಾ 'ಬಾಯಿಗೆ ನೀರು ಬಿಟ್ಟೆ.' ಭಾವನವರೂ 'ಬಾಯಿಗೆ ನೀರು ಬಿಟ್ಟರು.' ನನ್ನ ಜೀವನಪ್ರದೀಪ ನಂದಿಹೋಯಿತು. ನಾನು ಪತಿಯ ಶವದ ಮೇಲೆ ಬಿದ್ದು ಬಿದ್ದು ಬಾಯಿಗೆ ಬಂದಂತೆ ಪ್ರಲಪಿಸುತ್ತಾ ಪಾದಗಳನ್ನು ಮುಟ್ಟಿ ಮುಟ್ಟಿ ನಮಸ್ಕರಿಸುತ್ತಾ, "ಅಯ್ಯೋ ನನ್ನನ್ನು ಬಿಟ್ಟು ಹೋದಿರಾ!" ಎಂದು ಬಾಯಿ ಹೊಯ್ದುಕೊಂಡೆ. ಬಂಧುಗಳೆಲ್ಲರೂ

ಗೋಳೋ ಎಂದು ಅಳತೊಡಗಿದರು. ಭಾವನವರು ಮಾತ್ರ ಎಂದಿನಂತೆ ಮೌನವಾಗಿದ್ದರು. ಅವರ ಮುಖದಲ್ಲಿ ಒಂದು ವಿಧವಾದ ವಜ್ರ ಶಾಂತಿ ಮಂಡಿಸಿತ್ತು. ಸೀಮೆ ಎಣ್ಣೆಯ ದೀಪ ಮಾತ್ರ ತನ್ನ ಪ್ರೇತಜ್ಯೋತಿಯನ್ನು ಎಂದಿನಂತೆ ಬೀರುತ್ತಲೇ ಇತ್ತು.

ಮರುದಿನ ಶ್ಮಶಾನದಲ್ಲಿ ನನ್ನ ಕೈಬಳೆ ಒಡೆದರು; ನನ್ನ ಮೈ ಮೇಲಿದ್ದ ಆಭರಣಗಳನ್ನೆಲ್ಲ ತೆಗೆದರು. ಮಂಗಲಸೂತ್ರ ಬಿಚ್ಚಿದರು. ನನ್ನ ಕಣ್ಣೆದುರಿನಲ್ಲಿಯೇ ಅಗ್ನಿದೇವನು ನನ್ನ ಪ್ರಿಯಪತಿಯ ದೇಹವನ್ನು ತನ್ನ ಭೀಮಜ್ವಾಲಾ ಜಿಹ್ವೆಗಳಿಂದ ನುಂಗಿಕೊಂಡನು.

ನಾನು ಮಾವನ ಮನೆಗೆ ಬಂದ ಒಂದು ವರ್ಷದಲ್ಲಿಯೇ ನನ್ನ ಸಕಲ ಸೌಭಾಗ್ಯವೂ ಬರಿದಾಯಿತು. ನನಗಾಗ ಹದಿನೈದು ತುಂಬಿತ್ತು..

ನಾನು ಒಂದು ಕತ್ತಲೆಕೋಣೆಯಲ್ಲಿ ಕುಳಿತು ಅಳತೊಡಗಿದೆ. ಜನರು ಬಂದು ಎಷ್ಟೆಷ್ಟೋ ಸಮಾಧಾನ ಹೇಳುತ್ತಿದ್ದರು. ಬಂಧುಗಳು ಬಂದು ಅಳುತ್ತಾ "ಅಳಬೇಡ" ಎಂದು ನನಗೆ ಬೋಧಿಸುತ್ತಿದ್ದರು. ಮತ್ತೆ ಕೆಲವರು ತಮಗೆ ತಿಳಿದ ತತ್ತ್ವಗಳನ್ನು ಉಪದೇಶಿಸಿ, ನನ್ನ ದುಃಖವನ್ನು ಶಮನಮಾಡುವುದಕ್ಕೆ ಬದಲಾಗಿ ಉದ್ರೇಕಗೊಳಿಸಿ ಹೋಗುತ್ತಿದ್ದರು. ಹೀಗೆ ಕೆಲದಿನಗಳು ಕಳೆದುವು. ಆದರೆ ನಮ್ಮ ಭಾವನವರು ಮಾತ್ರ ನನ್ನನ್ನು ಬಂದು ನೋಡಲೂ ಇಲ್ಲ; ಮಾತಾಡಿಸಲೂ ಇಲ್ಲ; ಅವರು ಎಂದಿನಂತೆ ಶಾಂತರಾಗಿದ್ದರು. ಅಲ್ಲದೆ ಸಂಜೆಯಾಗುತ್ತಲೂ ಅವರು ಜಗಲಿಯ ಮೇಲೆ ಕುಳಿತು ಭಗವದ್ಗೀತೆಯನ್ನು ಓದುತಿದ್ದುದು ನನಗೆ ಕೇಳಿಸುತ್ತಿತ್ತು. ಅವರ ವಾಣಿಯನ್ನು ಕೇಳುತ್ತಲೇ ನನಗೆ ಸ್ವಲ್ಪ ಸಮಾಧಾನವಾಗುತ್ತಿತ್ತು. ಆದರೆ ಪತಿಯನ್ನು ಮುಂದೆ ಎಂದೆಂದಿಗೂ ನೋಡದಂತಾಯಿತಲ್ಲಾ ಎಂಬುದನ್ನು ನೆನೆದರೆ ಶೋಕ ಪ್ರಲಯ ವಾಗುತ್ತಿತ್ತು. ಅಂತೂ ಅಳುವುದೊಂದೇ ನನ್ನ ಉದ್ಯೋಗವಾಯಿತು.

ನಮ್ಮ ಭಾವನವರಿಗೆ ಆಗ ಇಪ್ಪತ್ತೇಳು ವಯಸ್ಸಾಗಿತ್ತು. ನನ್ನ ಪತಿಗಿಂತ ಅವರು ಮೂರು ವರ್ಷ ಹಿರಿಯವರಾಗಿದ್ದರು. ಅವರಿಗೆ ಮದುವೆಯಾಗಿರಲಿಲ್ಲ. ಅವರ ವಿಚಾರವಾಗಿ ನಾನಿನ್ನೂ ತವರುಮನೆ

ಯಲ್ಲಿದ್ದಾಗಲೇ ಏನೇನನ್ನೋ ಕೇಳಿದ್ದೆ. ಕೆಲವರು ಅವರ ತಲೆ ಕೆಟ್ಟು ಹೋಗಿದೆ ಎನ್ನುವರು. ಕೆಲವರು ಅವರಿಗೆ ಒಂದು ತರಹ ಹುಚ್ಚು ಎಂದು ಕರುಣೆಯಿಂದ ಹೇಳುವರು. ಮತ್ತೆ ಕೆಲವರು ಅವರು ತರ್ಕ ಶಾಸ್ತ್ರವನ್ನು ಮಿತಿಮಿೂರಿ ಓದಿದ್ದರಿಂದ ಮೆದುಳು ಮಂದವಾಗಿದೆ ಎನ್ನು ವರು. ಇನ್ನು ಕೆಲವರು ಶೂದ್ರರಾದರೂ ಉಪನಿಷತ್ತು, ವೇದ, ಭಗವ ದ್ಗೀತೆ ಇವುಗಳನ್ನು ಅಧ್ಯಯನಮಾಡಿದುದರಿಂದ ಪಾಪ ತಗುಲಿ ಹಾಗಾಗಿದೆ ಎಂದು ಉಪನ್ಯಾಸಮಾಡುವರು. ಎಲ್ಲಿಯೋ ಸ್ವಲ್ಪ ಜನರು ಮಾತ್ರ ಅವರು ಬಹಳ ದೊಡ್ಡವರು; ದೈವಾಂಶದವರು ಎಂದು ಪ್ರಶಂಸೆ ಮಾಡುತ್ತಿದ್ದರು. ತರಳೆಯಾದ ನನಗೆ ಏನೂ ತಿಳಿಯುತ್ತಿರಲಿಲ್ಲ. ಆಗ ನಾನು ಓದುತ್ತಿದ್ದುದು ನಾಲ್ಕನೆಯ ತರಗತಿಯಲ್ಲಿ. ಅಂತೂ ಅವರಲ್ಲಿ ಕುತೂಹಲವೇನೋ ಇರುತ್ತಿತ್ತು.

ಅವರು ಆಗಾಗ ನಮ್ಮಣ್ಣನವರೊಡನೆ ನಮ್ಮ ಮನೆಗೂ ಬರುತ್ತಿ ದ್ದರು. ಅವರನ್ನು ನೋಡಿದರೆ ನಮಗಿಂತಲೂ ಹೆಚ್ಚೇನು ಹುಚ್ಚಾಗಿ ದ್ದಂತೆ ತೋರುತ್ತಿರಲಿಲ್ಲ. ಅಲ್ಲದೆ ನಾನು ನೋಡಿದ ಇತರರಾರಲ್ಲಿಯೂ ಅವರಲ್ಲಿದ್ದ ತೇಜಸ್ಸು ಇರಲಿಲ್ಲ. ಅವರ ಮಾತುಕತೆ ಅಂದರೆ ಅವರನ್ನು ಹುಚ್ಚರೆಂದು ಭಾವಿಸಿದ್ದವರಿಗೂ ಕೂಡ ಕೇಳಲು ಬಹಳ ಇಷ್ಟ. ಮಕ್ಕ ಳೊಡನೆ ಅವರು ಪಸುಮಕ್ಕಳಂತೆ ಆಡುವರು. ದೊಡ್ಡವರೊಡನೆ ಎಷ್ಟು ಗಹನವಾದ ತತ್ತ್ವಗಳನ್ನಾದರೂ ಸುಲಭವಾಗಿ ಮಾತಾಡುವರು. ಬಡವರೊಡನೆ ಅವರ ಕಷ್ಟಸುಖಗಳನ್ನು ಸಾವಧಾನವಾಗಿ ಕೇಳುವರು. ಆದ್ದರಿಂದಲೇ ಅವರಲ್ಲಿ ನನಗೆ ಮೊದಲಿಂದಲೂ ಉತ್ಸಾಹ.

ಅವರೂ ನನ್ನ ಪತಿಯೂ ಬೆಂಗಳೂರಿನಲ್ಲಿ ವಿದ್ಯಾರ್ಥಿಗಳಾಗಿದ್ದರು. ನನ್ನ ಪತಿಗೆ ಅಣ್ಣನೆಂದರೆ ಪ್ರಾಣ. ಊರಿನವರೆಲ್ಲ ಅಣ್ಣತಮ್ಮಂದಿರೆಂದರೆ ಹಾಗಿರಬೇಕು ಎಂದು ಹೇಳಿಕೊಳ್ಳುತ್ತಿದ್ದರು. ನಮ್ಮ ಭಾವನವರ ಕೀರ್ತಿ ದೂರದ ಊರುಗಳಲ್ಲಿಯೂ ಪಬ್ಬಿತ್ತು. ವಿದ್ಯಾಭ್ಯಾಸವನ್ನು ಪೂರೈಸಿ ಕೊಂಡು ಇಬ್ಬರೂ ಮನೆಗೆ ಹಿಂದಿರುಗಿ ಬಂದರು. ಮದುವೆಯ ವಿಚಾರ ಬಂದಾಗ ಭಾವನವರು ತಾವು ಮದುವೆಯಾಗುವುದೇ ಇಲ್ಲ ಎಂದರು. ಅವರ ಹುಚ್ಚಿನ ವಿಚಾರವಾಗಿ ಜನರಿಗಿದ್ದ ಅಲ್ಪ ಸ್ವಲ್ಪ ಸಂದೇಹವೂ

ಸಂಪೂರ್ಣವಾಗಿ ನಿವಾರಣೆಯಾಯಿತು. ಅಣ್ಣ ಮದುವೆಯಾಗುವುದೇ ಇಲ್ಲ ಎಂದಮೇಲೆ ತಮ್ಮನಿಗೆ ವಿವಾಹ ನಿಶ್ಚಯವಾಯಿತು.

ನನ್ನ ವಿವಾಹವಾದ ಎರಡು ತಿಂಗಳಲ್ಲಿಯೇ ಮಾವ ತೀರಿಹೋದರು ಆಗಲೂ ಕೂಡ ನಮ್ಮ ಭಾವನವರು ಒಂದು ಸಾರಿಯಾದರೂ ಅತ್ತು ದನ್ನಾಗಲಿ, ಕಣ್ಣೀರು ಮಿಡಿದುದನ್ನಾಗಲಿ ನಾನು ಕಾಣಲಿಲ್ಲ. ನನ್ನ ಪತಿಯಾದರೋ ಬಹಳ ಕಾಲ ರೋದಿಸಿದರು. ತಂದೆ ತೀರಿಕೊಂಡರೂ ಅಳದವನು ಕಲ್ಲೆದೆಯವನು, ಎಂದು ಜನರು ನಮ್ಮ ಭಾವನವರನ್ನು ಹಳಿದರು. ನನಗೂ ಒಂದೊಂದು ಸಾರಿ ಹಾಗೇ ಅನ್ನಿಸುತ್ತಿತ್ತು. ಆದರೆ ಅವರನ್ನು ನೋಡಿದರಾಗಲಿ, ಅವರ ಮಾತುಗಳನ್ನು ಕೇಳಿದರಾಗಲಿ, ಜನರೊಡನೆ ಅವರು ನಡೆಸುತ್ತಿದ್ದ ವ್ಯವಹಾರದಲ್ಲಿಯಾಗಲಿ ಅವರು ಬಹಳ ಮೆಲ್ಲೆದೆಯುವರೆಂದು ತೋರದೆ ಇರುತ್ತಿರಲಿಲ್ಲ. ಹಾಗೆ ನೋಡಿದರೆ, ನನ್ನ ಪತಿಯೇ ಅವರಿಗಿಂತಲೂ ಎಷ್ಟೋ ಕಠಿನಸ್ವಭಾವದವರೆಂದು ಹೇಳಬಹು ದಾಗಿತ್ತು. ನಮ್ಮ ಭಾವನವರಿಗೆ ನನ್ನ ಪತಿಯಲ್ಲಿ ಬಹಳ ಪ್ರೀತಿ; ಬಹಳ ಸಲುಗೆ, ಬಹಳ ಆದರ. ಸಾಧಾರಣವಾಗಿ ಅಣ್ಣತಮ್ಮಂದಿರಲ್ಲಿ ಆ ವಿಧವಾದ ಸ್ನೇಹವೇ ಅಪರೂಪ ಎಂದರೂ ತಪ್ಪಾಗದು. ನನ್ನ ಪತಿಗೆ ಅವರಲ್ಲಿ ಬಹಳ ಪೂಜ್ಯಬುದ್ಧಿ. ಅವರಿಬ್ಬರೂ ಮನೆಯ ಮಹಡಿಯ ಮೇಲೆ ಕುಳಿತು ಕಾವ್ಯ, ತತ್ತ್ವ, ರಾಜಕೀಯ, ಇತ್ಯಾದಿ ವಿಚಾರಗಳನ್ನು ಕುರಿತು ಮಾತಾಡುತ್ತಿದ್ದಾಗ ಮರೆಯಲ್ಲಿ ನಿಂತು ಆಲಿಸುವುದೆಂದರೆ ನನಗೊಂದು ಹಬ್ಬವಾಗಿತ್ತು. ಹಾಸ್ಯದಲ್ಲಿಯೂ ನಮ್ಮ ಭಾವನವರು ಯಾರಿಗೂ ಬಿಟ್ಟುಕೊಡುತ್ತಿರಲಿಲ್ಲ. ಅವರಿದ್ದರೆ ಮನೆಯೆಲ್ಲ ಜೀವದಿಂದ ತುಂಬಿ ತುಳುಕುವುದು.

ನಮ್ಮ ಭಾವನವರಿಗೆ ವೈರಾಗ್ಯ, ದೇವರಲ್ಲಿ ಬಹಳ ಭಕ್ತಿ ಎಂದು ಕೇಳಿದ್ದೆ. ಅವರನ್ನು ನೋಡಿದರೆ ಇತರ ಸಾಧಾರಣ ನವಯುವಕರಂತೆ ತೋರುತ್ತಿದ್ದರು. ಅವರು ಒಂದು ದಿನವಾದರೂ ದೇವರ ಪೂಜೆ ಮಾಡಿ ದುದನ್ನು ನಾನು ನೋಡಲಿಲ್ಲ. ಮಡಿಗಿಡಿ ಒಂದನ್ನೂ ಆಚರಿಸುತ್ತಿರಲಿಲ್ಲ. ಕಡೆಗೆ ಜಾತಿಪದ್ಧತಿಯಂತೆ ನಾಮವನ್ನು ಕೂಡ ಹಾಕಿಕೊಳ್ಳುತ್ತಿರಲಿಲ್ಲ. ಅಲ್ಲದೆ ಕ್ರಾಪು ಬೇರೆ ಬಿಟ್ಟಿದ್ದರು. ದಿನವೂ ಅದನ್ನು ಬಹಳ ಚೆನ್ನಾಗಿ

ಬಾಚಿಕೊಳ್ಳುವರು. ಮುಂಗುರುಳುಗಳು ಸುರುಳಿಸುರುಳಿಯಾಗಿ ಕೆನ್ನೆ ಹಣೆಗಳ ಮೇಲೆ ನಲಿದಾಡುವುದನ್ನು ನಾನು ಎಷ್ಟೋ ಸಾರಿ ನೋಡಿ ಆನಂದಪಡುತ್ತಿದ್ದೆ. ಉಡುಗೆಯಲ್ಲಿಯೂ ವೈರಾಗ್ಯದ ಚಿಹ್ನೆ ಸ್ವಲ್ಪವೂ ತೋರುತ್ತಿರಲಿಲ್ಲ. ಅವರು ಬೆಲೆಯುಳ್ಳ ಬಟ್ಟೆಗಳನ್ನೇನೋ ಧರಿಸುತ್ತಿರಲಿಲ್ಲ, ನಿಜ. ಆದರೆ ಅವರುಡುಗೆಯ ಸರಳತೆ ಶರತ್ಕಾಲದ ಬೆಳ್ಮುಗಿಲಿನ ನಡುವೆ ಬೆಳಗುವ ತಾರಾನಾಥನ ಸರಳತೆಯಂತೆ ಮಧುರಮನೋಜ್ಞವಾಗಿರುತ್ತಿತ್ತು. ಸಾಲದ್ದಕ್ಕೆ ಬೇರೆ ಕೆಲವು ಸಾರಿ ನಾಸ್ತಿಕರಂತೆ ಮಾತಾಡುವರು. ಬ್ರಹ್ಮ, ವಿಷ್ಣು, ಮಹೇಶ್ವರ ಇವರನ್ನೆಲ್ಲ ಹಾಸ್ಯ ಮಾಡುವರು. ಸ್ವರ್ಗ ನರಕಗಳನ್ನು ಹೀಯಾಳಿಸಿ ಅವುಗಳಿಲ್ಲವೆಂದು ಹೇಳುವರು. ಅಂತೂ ನಮ್ಮ ಭಾವನವರು ನಮಗೆಲ್ಲ ಒಂದು ದೊಡ್ಡ ಸಮಸ್ಯೆಯಾಗಿದ್ದರು. ನನ್ನ ಪತಿಯೊಬ್ಬರಿಗೆ ಮಾತ್ರ ಅವರು ಅರ್ಥವಾಗುತ್ತಿದ್ದರೆಂದು ತೋರುತ್ತದೆ.

ಮನೆಗೆ ಸ್ವಲ್ಪ ದೂರದಲ್ಲಿ ಒಂದು ಎತ್ತರವಾದ ಸ್ಥಳವಿದೆ. ಸುತ್ತಲೂ ಕಾಡುಗಳಿವೆ; ನಡುವೆ ದೊಡ್ಡ ಬಂಡೆ. ಕೂತುಕೊಳ್ಳಲು ಬಹಳ ಸುಖಕರವಾಗಿದೆ. ಅಲ್ಲಿಗೆ ನನ್ನ ಪತಿಯೂ ಭಾವನವರೂ ಎಷ್ಟೋ ಸಾರಿ ಹೋಗುತ್ತಿದ್ದರು. ಇನ್ನೆಷ್ಟೋ ಸಾರಿ ಭಾವನವರೊಬ್ಬರೇ ಅಲ್ಲಿ ಕುಳಿತು ಧ್ಯಾನಮಾಡುತ್ತಿದ್ದರೆಂದು ಕಂಡವರು ಹೇಳುತ್ತಿದ್ದರು. ಅಂತೂ ಅವರ ಕಣ್ಣಿನ ಕಾಂತಿ, ಅವರ ಮುಖದ ತೇಜಸ್ಸು — ಇವುಗಳೇನೋ ನನಗೆ ಅನ್ಯಾದೃಶವಾಗಿದ್ದುವು. ಒಂದು ಇಂಪಾದ ಕೀರ್ತನೆಯಂತೆ ನನಗವರು ಮನೋಹರವಾಗಿದ್ದರು; ಪವಿತ್ರವಾಗಿದ್ದರು. ನನ್ನ ಪತಿಯಲ್ಲಿ ನನಗೆಷ್ಟು ಪ್ರೇಮವಿತ್ತೋ ನಮ್ಮ ಭಾವನವರಲ್ಲಿ ನನಗಷ್ಟೇ ಭಕ್ತಿಯಿತ್ತು.

* * * *

ಪತಿಯನ್ನು ಕಳೆದುಕೊಂಡ ನಾನು ಮೂಲೆ ಹಿಡಿದು ಅಳತೊಡಗಿದೆ. ಯಾರು ಏನು ಹೇಳಿದರೂ ನನ್ನ ದುಃಖ ಶಮನವಾಗಲಿಲ್ಲ. ಒಂದು ದಿನ ನಮ್ಮ ಅತ್ತೆಯವರು ಭಾವನವರ ಬಳಿ ಹೋಗಿ "ನೀನಾದರೂ ಹೋಗಿ

ಒಂದು ಮಾತು ಹೇಳಬಾರದೆ? ಆ ಗೋಳನ್ನು ನಾನು ನೋಡಲಾರೆ'' ಎಂದರಂತೆ.

ತಾಯಿಯ ಅಪ್ಪಣೆಯಂತೆ ಭಾವನವರು ನಾನಿದ್ದ ಕೋಣೆಗೆ ಬಂದರು. ಆಗ ಅಲ್ಲಿ ನಾನೊಬ್ಬಳೇ ಇದ್ದೆ. ಅವರು ಒಳಗೆ ಬಂದಾಗ ಏನೋ ಒಂದು ಪ್ರಶಾಂತ ಜ್ಯೋತಿ ಪ್ರವೇಶಿಸಿದಂತಾಯ್ತು. ನಾನು ಅಳುವುದನ್ನು ಸ್ವಲ್ಪ ಕಡಿಮೆಮಾಡಿ ಎದ್ದುನಿಂತೆ. ಅವರೂ ನಿಂತು ಕೊಂಡೆ ಮಾತಾಡಿದರು. ವಾಣಿ ಗಂಭೀರವಾಗಿತ್ತು.

''ಅಮ್ಮಾ, ನಿನ್ನ ಪತಿ ನನಗೆ ತಮ್ಮನಲ್ಲವೇ? ನನಗೆ ದುಃಖ ವಿಲ್ಲವೇ? ನಮ್ಮ ಕಣ್ಣಿಗೆ ಮರೆಯಾದ ಮಾತ್ರಕ್ಕೆ ಅವನು ಇಲ್ಲವೆಂದು ಕೊಂಡೆಯಾ? ನಾವು ಆತನ ದೇಹವನ್ನು ಮಾತ್ರ ಪ್ರೀತಿಸುತ್ತಿದ್ದೆವೇ? ಹಾಗಾದರೆ, ದೇಹದ ಪ್ರೀತಿ ದೇಹದೊಡನೆ ಏಕೆ ಹೋಗಲಿಲ್ಲ? ಅವನಿನ್ನೂ ಇದ್ದಾನೆ, ನಾನು ಬಲ್ಲೆ; ನೀನೂ ತಿಳಿಯಬಲ್ಲೆ. ಶೋಕವಿರುವುದು ಪ್ರದರ್ಶನಕ್ಕಾಗಿಯೆ? ನೀನೇ ಹೇಳಮ್ಮ! ಇಂದಲ್ಲ ನಾಳೆ ನಾವೆಲ್ಲರೂ ಅವನು ಹೋದಲ್ಲಿಗೇ ಹೋಗಬೇಕಷ್ಟೆ? ಸುಮ್ಮನೆ ಅತ್ತರೇನು ಫಲ? ಆತನಿಗೆ ಸಂತೋಷವಾಗುವಂತೆ ಬಾಳಿದರೆ ಆತನು ನಿನಗೆ ದೊರಕದೆ ಹೋದಾನೆ?'' ಎಂದು ಮೊದಲಾಗಿ ಮಾತಾಡಿದರು. ಆ ವಾಣಿ ನನ್ನ ಭಾಗಕ್ಕೆ ಸ್ವರ್ಗದಿಂದಿಳಿದು ಬಂದಂತಿತ್ತು. ನಾನು ಸುಮ್ಮನೆ ನಿಂತು ಕೊಂಡೆ. ಭಾವನವರು ಹಾಗೆಯೇ ಹಿಂದಿರುಗಿ ಹೊರಟುಹೋದರು.

* * * *

ಕಾಲದ ಹೊನಲು ಎಡೆಬಿಡದೆ ಮುಂಬರಿಯಿತು. ಅದರ ವಾಹಿನಿ ಯಲ್ಲಿ ಎಷ್ಟೆಷ್ಟೋ ಜೀವನದ ಘಟನೆಗಳು ತೇಲಿಹೋದುವು. ಬರಬರುತ್ತ ಪತಿಯ ಮರಣವೂ ದೂರದ ಕನಸಾಯಿತು. ನಾನು ಭಾವನವರಲ್ಲಿ ಗುರುಭಾವವನ್ನಿಟ್ಟು ಶಾಂತಿಲಾಭ ಪಡೆಯತೊಡಗಿದೆ. ನನಗೆ ಓದಲು ಸುಲಭವಾದ ಪುಸ್ತಕಗಳನ್ನು ಕೊಟ್ಟು ನನ್ನ ಮನಸ್ಸು ಹಗಲುಗನಸುಗಳಲ್ಲಿ ತೊಳಲದಂತೆ ಮಾಡಿದರು. ನನ್ನಲ್ಲಿ ಬಹಳ ವಿಶ್ವಾಸ ತೋರಿ ಆಗಾಗ ನನ್ನೊಡನೆ ಒಂದೆರಡು ಮಾತುಕತೆ ಆಡುತ್ತಿದ್ದರು. ನಾನೂ ಅವರೊಡನೆ

ಸಲುಗೆಯಿಂದ ವರ್ತಿಸತೊಡಗಿದೆ. ಅವರು ಹಾಡುತ್ತಿದ್ದರೆ ಕುಳಿತು ಕೇಳುತ್ತಿದ್ದೆ. ಅವರು ಕಾವ್ಯಗಳನ್ನು ಓದುತ್ತಿದ್ದರೆ "ಸಾವಿತ್ರಿ, ಸೀತೆ ಮೊದಲಾದವರ ವಿಚಾರವಾಗಿ ಓದಿ" ಎಂದು ಕೇಳುತ್ತಿದ್ದೆ. ಅನೇಕ ಸಾರಿ ದೇವರು, ಆತ್ಮ, ಜನ್ಮಾಂತರ, ಕರ್ಮ, ನೀತಿ, ಧರ್ಮ ಇಂತಹ ಗಹನ ವಿಷಯಗಳನ್ನು ನನ್ನ ಗ್ರಾಮ್ಯ ಬುದ್ಧಿಗೆ ಅಂಟುವಂತೆ ಸಾವಧಾನ ದಿಂದ ತಿಳಿಸುತ್ತಿದ್ದರು. ನಾನು ಏನನ್ನಾದರೂ ಓದುತ್ತಾ ಅರ್ಥವಾಗ ದಿದ್ದರೆ ಅವರನ್ನು ಕೇಳಿ ಸಂಶಯ ಪರಿಹಾರಮಾಡಿಕೊಳ್ಳುತ್ತಿದ್ದೆ. ಅವ ರೊಡನೆಯಲ್ಲದೆ ಇನ್ನಾರೊಡನೆಯಾದರೂ ನಾನು ಹಾಗೆ ವರ್ತಿಸಿದ್ದರೆ ಅಪವಾದಕ್ಕೀಡಾಗದೆ ಇರುತ್ತಿರಲಿಲ್ಲ. ಆದರೆ ಆ ಸೂರ್ಯನಲ್ಲಿ ಕಳಂಕ ವನ್ನಾರೋಪಿಸಲು ಯಾರಿಗೆ ತಾನೇ ಧೈರ್ಯ?

ಹೀಗಿರುತ್ತಿರಲು ಒಂದು ದಿನ ಒಂದು ಸಂಗತಿ ನಡೆಯಿತು. ನನಗಾಗ ವಯಸ್ಸು ಹತ್ತೊಂಬತ್ತಾಗಿತ್ತು. ಭಾವನವರು ದಿನವೂ ಸಂಜೆಯ ಹೊತ್ತು ಎಲ್ಲಿಗೋ ಹೋಗಿ ಬಹಳ ಹೊತ್ತಾದಮೇಲೆ ಮನೆಗೆ ಬರು ತ್ತಿದ್ದರು. ನನಗೆ ಅದನ್ನು ತಿಳಿಯಬೇಕೆಂದು ಕುತೂಹಲ ಹುಟ್ಟಿತು. ಅವರು ಹೊರಗೆ ಹೊರಡಲು ನಾನೂ ಅವರಿಗೆ ತಿಳಿಯದಂತೆ ಅವರನ್ನು ಹಿಂಬಾಲಿಸಿದೆ. ನಾನು ಮಾಡಿದ್ದು ತಪ್ಪು ಎಂದು ನನಗೀಗ ತಿಳಿಯುತ್ತದೆ. ಆದರೆ ಆಗ ಅದೊಂದು ಸಾಹಸಕಾರ್ಯವೆಂದು ಮಾತ್ರ ಹಾಗೆ ಮಾಡಿದೆ. ಭಾವನವರು ಬಾಯಲ್ಲಿ ಏನೇನೋ ಕವನಗಳನ್ನು ಹಾಡಿಕೊಳ್ಳುತ್ತಾ ಎಂದಿನಂತೆ ಕಲ್ಲುಗುಡ್ಡಕ್ಕೆ ಹೋಗಿ ಕುಳಿತುಕೊಂಡರು. ನಾನು ದೂರ ಮರದ ಮರೆಯಲ್ಲಿ ನಿಂತು ನೋಡುತ್ತಿದ್ದೆ. ಆಗತಾನೇ ಸೂರ್ಯನು ಕಡೆದ ಕೆಂಗೆಂಡದಂತೆ ಹೊಂಬೆಳಕನ್ನು ಚೆಲ್ಲುತ್ತ ಪರ್ವತಗಳ ಹಿಂದೆ ಮರೆ ಯಾಗುತ್ತಿದ್ದನು. ಅರಣ್ಯದ ಹಸುರು ಹೊಂಬಿಸಿಲಲ್ಲಿ ನಳನಳಿಸಿತ್ತು. ಹಕ್ಕಿಗಳು ಹಾಡುತ್ತ ಕೂಗುತ್ತ ಗೂಡು ಸೇರುತ್ತಿದ್ದುವು. ನನ್ನ ಜೀವನದ ವಸಂತ ಮಾಸವೇ ಹೊರಗೆ ಪ್ರತಿಫಲಿಸಿದಂತಿತ್ತು. ನನ್ನ ಮೈಯಲ್ಲಿ ಮಿಂಚಿನ ಹೊಳೆ ಹರಿದಂತಾಯಿತು.

ಅವರು ಕುಳಿತು ಸುತ್ತಲೂ ನೋಡುತ್ತ ಮನೋಹರವಾಗಿ ಹಾಡಿ ದರು. ಆ ಸವಿದನಿ ನನ್ನೆದೆಯಲ್ಲಿ ಒಳಸಂಚುಗಳನ್ನು ನೆಯ್ಯತೊಡಗಿತು.

ಆ ಹೊಂಬಿಸಿಲಲ್ಲಿ ಅವರ ಸುಂದರಮೂರ್ತಿ ಸುಂದರತರವಾಗಿ ಕಂಗೊಳಿಸಿತು. ಮುಖದ ಜ್ಯೋತಿ ಇಮ್ಮಡಿಯಾದಂತಿತ್ತು. ನೀಳವಾದ ಮುಂಗುರುಳಿನ ಕೇಶರಾಶಿ ಸಂಜೆಯ ಗಾಳಿಯಲ್ಲಿ ಎದೆಯನ್ನು ಕೆಣಕುವಂತೆ ನರ್ತಿಸುತ್ತಿತ್ತು. ಆ ದಿನ, ಆ ಮಂಗಲ ಸಂಧ್ಯೆಯ ಪಿಂಗಲ ಶೋಭೆಯಲ್ಲಿ ಮರಗಳ ಮರೆಯಲ್ಲಿ ಕದ್ದುನಿಂತು ನೋಡುತ್ತಿದ್ದ ನನಗೆ ಅವರು ಆಗತಾನೇ ಅಗ್ನಿಸ್ನಾನಮಾಡಿಕೊಂಡು ಹೊರಗೆ ಬಂದ ದೇವಮೂರ್ತಿಯಂತೆ ರಾರಾಜಿಸಿದರು. ನನ್ನ ಮನಸ್ಸು ಅವರ ಸೌಂದರ್ಯಕ್ಕೆ ಸೋತು ಮುಗ್ಧವಾಯಿತು. ಅವರಲ್ಲಿ ಅದುವರೆಗೆ ನನಗಿದ್ದ ಭಕ್ತಿ ಛದ್ಮವೇಷದ ಪ್ರೇಮವೆಂದು ಭಾಸವಾಯಿತು. ನಾನು ಹೆದರಿ ನಡುಗಿದೆ. ಹಾಗೆಯೇ ಹಿಂದಿರುಗಿ ಏನೋ ಭಯಂಕರವಾದುದನ್ನು ಕಂಡು ಅದರಿಂದ ತಪ್ಪಿಸಿಕೊಂಡು ಓಡಿಬರುವವಳಂತೆ ಮನೆಗೆ ಬಂದೆ. ಮನೆಗೆ ಬಂದು ನನ್ನ ಪತಿಯೂ ಭಾವನವರೂ ಇಬ್ಬರೂ ಇದ್ದ ಒಂದು ಚಿತ್ರಪಟದೆದುರು ನಿಂತು ಕೈಮುಗಿದೆ. ಆ ದುರಾಶೆಯ ಪಿಶಾಚ ಸದ್ಯಕ್ಕೆ ತೊಲಗಿ ಹೋಯಿತು. ಇನ್ನುಮೇಲೆ ಕದ್ದುನಿಂತು ಅವರನ್ನೆಂದಿಗೂ ನೋಡುವುದಿಲ್ಲ ಎಂದು ಆಣೆಯಿಟ್ಟುಕೊಂಡೆ.

ಕೆಲವು ದಿನಗಳಾದವು. ಎಂದಿನಂತೆ ನಮ್ಮ ಜೀವನ ಸಾಗಿತು. ಆದರೆ ನನ್ನ ಮನಸ್ಸಿನಲ್ಲಿ ಮೊದಲು ಪ್ರಾರಂಭವಾದ ಕಳವಳ ಈಗ ಹೋರಾಟವಾದಂತೆ ತೋರಿತು. ಎಂದಿನಂತೆ ಅವರನ್ನು ಬಹಳ ಹೊತ್ತು ಕಣ್ಣೆತ್ತಿ ನೋಡಲಾರದೆ ಹೋದೆ. ಮಿಂಚಿನಂತೆ ಹೊಳೆಯುತ್ತಿದ್ದ ಅವರ ಕಣ್ಣುಗಳು ನನ್ನ ಕಣ್ಣುಗಳನ್ನು ಸಂಧಿಸಿದಾಗ ನನಗೇನೋ ಭಯವಾದಂತಾಗಿ ದೃಷ್ಟಿಯನ್ನು ಬೇರೆಯ ಕಡೆಗೆ ತಿರುಗಿಸಿಬಿಡುತ್ತಿದ್ದೆ. ಅವರು ಮಾತ್ರ ಎಂದಿನಂತೆ ಹಿಮಾಲಯ ಸದೃಶವಾದ ಗಾಂಭೀರ್ಯದಿಂದ ವರ್ತಿಸುತ್ತಿದ್ದರು. ಅದನ್ನು ನೋಡಿ ನನಗಿನ್ನೂ ಭಯವಾಗುತ್ತಿತ್ತು.

ಇನ್ನೊಂದು ದಿನ ಅವರು ಸಂಜೆಯ ಹೊತ್ತಿನಲ್ಲಿ ಕಲ್ಲುಗುಡ್ಡಕ್ಕೆ ಹೋಗಿದ್ದರು. ನಾನು ಮನೆಯಲ್ಲಿ ಕುಳಿತು ಏನನ್ನೋ ಓದುತ್ತಿದ್ದೆ. ಇದ್ದಕ್ಕಿದ್ದಹಾಗೆ ಹಿಂದೆ ನಡೆದ ಸಂಗತಿಯೆಲ್ಲ ಮತ್ತೆ ಜ್ಞಾಪಕಕ್ಕೆ ಬಂದಿತು. ಅವರ ಸುಂದರಮೂರ್ತಿ ನನ್ನ ಕಣ್ಣೆದುರು ನಲಿಯಿತು. ನಾನು ಭೀತಳಾದೆ.

ಮತ್ತೆ ನನ್ನನ್ನು ನಾನೇ ಬೈದುಕೊಂಡು, ಭೀತಿಯ ಪ್ರೇತವನ್ನು ಇಂದು ಕೊಂದೇಬಿಡುತ್ತೇನೆ ಎಂದು ನಿಶ್ಚಯಿಸಿ, ಕೈಲಿದ್ದ ಪುಸ್ತಕವನ್ನು ತೆಗೆದು ಕೊಂಡು ನೇರವಾಗಿ ಗುಡ್ಡಕ್ಕೆ ಹೊರಟೆ. ಈ ಸಾರಿ ನಾನು ಹೋದುದು ಗುಟ್ಟಾಗಲ್ಲ. ಭಾವನವರು ನಾನು ಬರುವುದನ್ನು ದೂರದಿಂದಲೇ ನೋಡಿ, ಹಾಡುತ್ತಿದ್ದ ಹಾಡನ್ನು ನಿಲ್ಲಿಸಿ ನನ್ನ ಕಡೆಗೇ ನೋಡತೊಡಗಿದರು. ನಾನೂ ಧೈರ್ಯವಾಗಿ ಸ್ವಲ್ಪ ಮುಗುಳ್ನಗುತ್ತಾ ಅವರನ್ನೇ ಎವೆಯಿಕ್ಕದೆ ನೋಡುತ್ತ ಹತ್ತಿರ ಹೋದೆ. ದುರಾಶೆ ಸಂಪೂರ್ಣವಾಗಿ ನಾಶವಾಯಿ ತೆಂದು ಹಿಗ್ಗಿದೆ. ಆದರೆ ಆ ದುರಾಶಾಪ್ರೇತ ಬೇರೊಂದು ವೇಷಹಾಕಿ ಕೊಂಡು ಹೃದಯದಲ್ಲಿ ಬಲವಾಗಿ ಬೇರೂರಿತೆಂದು ನಾನಾಗ ತಿಳಿಯಲಿಲ್ಲ. ಆ ಸಂಧ್ಯಾಕಾಲದ ಸ್ವರ್ಣಶೋಭೆಯಲ್ಲಿ ಅವರ ಅಲೌಕಿಕ ಸೌಂದರ್ಯ ವನ್ನು ಕಣ್ಣುತುಂಬ ನೋಡುವುದರಲ್ಲಿ ನನಗೊಂದು ರುಚಿ ಹುಟ್ಟಿತು. ಅವರ ಸೌಂದರ್ಯದೆದುರು ಸಂಜೆಯ ಸೊಬಗು ಕಾಂತಿಹೀನವಾಗಿ ತೋರಿತು.

ಅವರು ಮೊದಲು ಯಾವ ಮಾತನ್ನೂ ಆಡಲಿಲ್ಲ. ಆದರೆ ಕಣ್ಣಿನಲ್ಲಿ "ಏಕೆ ಬಂದೆ?" ಎಂಬ ಪ್ರಶ್ನೆ ಹೊಳೆಯುತ್ತಿತ್ತು. ನಾನೇ ಮೊದಲು ಮಾತಾಡಿದೆ. ನನ್ನ ಕೈಲಿದ್ದ ಪುಸ್ತಕವನ್ನು ಅವರ ಕೈಗೆ ಕೊಟ್ಟೆ. ಕೊಡುವಾಗ ಹಿಂದಿನಂತೆ ಅಳುಕಿ ಕೊಡಲಿಲ್ಲ. ದುರಾಶಾಪ್ರೇತವನ್ನು ಸಂಪೂರ್ಣವಾಗಿ ಕೊಂದೆನೆಂಬ ಗರ್ವದಿಂದ ಸ್ವಲ್ಪ ರಭಸದಿಂದಲೇ ಕೈನೀಡಿದೆ. ಅವರ ಕೈಗೆ ನನ್ನ ಕೈ ಸೋಂಕಿತು. ನನಗೆ ಏನೋ ಒಂದು ಆನಂದವಾಯಿತು. ಅದನ್ನು ನಾನೇ ಒಪ್ಪಿಕೊಳ್ಳದೆ, ಧೈರ್ಯವಾಗಿ ನಿಂತು "ಪುಸ್ತಕದಲ್ಲಿ ಒಂದು ಭಾಗ ಸರಿಯಾಗಿ ತಿಳಿಯಲಿಲ್ಲ ; ಆದ್ದರಿಂದ ಬಂದೆ" ಎಂದು ಹೇಳಿದೆ. ಅವರು ಸ್ವಲ್ಪವೂ ಅಪ್ರತಿಭರಾಗದೆ ಶಾಂತಿಯಿಂದ ಎಲ್ಲವನ್ನೂ ವಿವರಿಸಿ ಹೇಳಿದರು. ನಾನು ಅವರೆದುರು ಒಂದೆಡೆ ಕುಳಿತು ಕೇಳುವವಳಂತಿದ್ದೆ. ಆದರೆ ಅಷ್ಟು ಹೊತ್ತೂ ಅವರನ್ನೇ ಅಭೀಷ್ಟಕ ನಯನಗಳಿಂದ ನೋಡುತ್ತಿದ್ದೆ. ಕೊನೆಗೆ ಎಲ್ಲವನ್ನೂ ಸವಿಸ್ತಾರವಾಗಿ ತಿಳಿದುಕೊಂಡವಳಂತೆ ನಟಿಸಿ, ಏನೋ ಮಹಾ ದಿಗ್ವಿಜಯಮಾಡಿದವ ಳಂತೆ ಹೆಮ್ಮೆಯ ಹೆಜ್ಜೆಗಳನ್ನಿಡುತ್ತಾ ಮನೆಗೆ ಬಂದೆ.

ಮನೆಗೇನೋ ಬಂದೆ. ಆದರೆ ಮನಸ್ಸೆಲ್ಲ ಗುಡ್ಡದಲ್ಲಿಯೇ ಇತ್ತು. ಕಣ್ಣು ಅವರನ್ನೇ ಕಾಣುತ್ತಿತ್ತು. ಆ ಮುಂಗುರುಳು, ಆ ಕೆನ್ನೆ, ಆ ನಸ್ಸು ಕೊಂಕಿದ ನೀಳವಾದ ಮೂಗು, ಆ ಕೆಂದುಟಿ, ಆ ಚೆಲುವಿನ ಮೊಗದ ಮೇಲೆ ನಲಿಯುತ್ತಿದ್ದ ಮುಗುಳ್ನಗೆ, ಆ ವಿಶಾಲವಾದ ನೀಲಾಕಾಶಸದೃಶವಾದ ಗಂಭೀರವಾದ ನೇತ್ರದ್ವಯ, ಆ ಕೋಮಲಕರಪಲ್ಲವ— ಇವುಗಳಿಂದ ಮನಸ್ಸು ಪಾರಾಗಲಾರದೆ ಹೋಯಿತು. ಆ ಸ್ಪರ್ಶವನ್ನು ನೆನೆದು ರೋಮಾಂಚವಾಯಿತು. ಮನಸ್ಸು ಅದನ್ನು ಮತ್ತೊಮ್ಮೆ ಬಯಸಿತು. ಆದರೆ ಈ ನಾರಿ ಚಿತ್ರಪಟದೆದುರು ನಿಂತು ಕೈಮುಗಿಯಲಿಲ್ಲ. ಏಕೆಂದರೆ, ನಾನು ಯಾವ ಕೆಲಸವನ್ನೂ ಕದ್ದು ಮಾಡಿರಲಿಲ್ಲ. ಬಹಿರಂಗವಾಗಿ ಮಾಡಿದ್ದರಲ್ಲಿ ದೋಷವಿಲ್ಲ ಎಂದು ನನಗೆ ನಾನೇ ಹೇಳಿಕೊಂಡೆ. ತರುವಾಯ ಹಾರ್ಮೋನಿಯಂ ತೆಗೆದುಕೊಂಡು ಬಾರಿಸತೊಡಗಿದೆ. ಹಿಂದೆ ಕೀರ್ತನೆಗಳನ್ನು ಹಾಡುತ್ತ ಭಕ್ತಿವರ್ಧಕ ರಾಗವನ್ನು ಬಾರಿಸುತ್ತಿದ್ದೆ. ಇಂದು ರಾಗವು ತನಗೆ ತಾನೇ ರಾಗಪೂರ್ಣವಾಗತೊಡಗಿತು.

ಕೆಲವು ದಿನಗಳಲ್ಲಿ ಅವರಿಗೂ ನನಗೂ ಇದ್ದ ಸಂಬಂಧವೇ ಬೇರೆಯಾದಂತೆ ನನಗೆ ತೋರಿತು. ನನ್ನ ದೃಷ್ಟಿಯೇ ಬದಲಾಯಿಸಿತು. ಅವರ ದೃಷ್ಟಿಯೂ ಬದಲಾಯಿಸಿದಂತೆ ತೋರತೊಡಗಿತು. ಅವರು ನನ್ನೊಡನೆ ಮಾತಾಡಿದರೆ ಗುಟ್ಟಾಗಿ ನುಡಿಯುವಂತೆ ಅನುಭವವಾಗತೊಡಗಿತು. ಅವರು ನನ್ನನ್ನು ನೋಡಿದರೆ ನನಗೆ ಅರ್ಥಗರ್ಭಿತವಾಗಿ ತೋರಿತು. ಅವರೂ ನನ್ನಂತೆಯೇ ಅಲ್ಲವೇ? ಅವರಿಗೆ ನನ್ನ ಮೇಲಿದ್ದ ವಿಶ್ವಾಸವೂ ಛದ್ಮವೇಷದ ಪ್ರೇಮ ಎಂದು ಭಾವಿಸಿದೆ. ಆದರೆ ಹಿಮಾಲಯದ ಮಂಜು ಎಷ್ಟು ಕರಗಿದರೂ ಅದೆಂದೂ ಹಿಮಾಲಯವೇ ಎಂಬುದು ನನ್ನ ಕ್ಷುದ್ರ ಬುದ್ಧಿಗೆ ತಿಳಿಯಲಿಲ್ಲ. 'ಅಲ್ಲದೆ ಮಂಜು ಕರಗಿದರೆ ತಾನೆ ಏನು? ಅದು ಪವಿತ್ರವಾದ ಗಂಗಾನದಿಯಾಗದೆ, ಎಂದಿಗಾದರೂ ಕೊಳಕು ಕಾಲುವೆಯಾಗುವುದೇ? ಗಂಗೆಯು ಕೊಳಕು ಕಾಲುವೆಯನ್ನು ತೊಳೆದು ಪುನೀತವನ್ನಾಗಿ ಮಾಡದೆ ತಾನೇ ಎಂದಿಗಾದರೂ ಕೊಳಕಾಗುವುದೇ?

ಒಂದು ದಿನ ರಾತ್ರಿ ಮನೆಯಲ್ಲಿ ಎಲ್ಲರೂ ಮಲಗಿ ಗಾಢನಿದ್ದೆಯಲ್ಲಿದ್ದರು. ನಾನು ಮಾತ್ರ ನನ್ನ ಕೊಟಡಿಯಲ್ಲಿ ಕುಳಿತು ಬಾಗಿಲು

ಹಾಕಿಕೊಂಡು ಓದುತ್ತಿದ್ದೆ. ಓದುತ್ತಿದ್ದೇನೆಂದು ತಿಳಿದುಕೊಂಡಿದ್ದೆ. ಆದರೆ ಮನಸ್ಸು ವಿಪ್ಲವಾವಸ್ಥೆಯಲ್ಲಿತ್ತು. ನದಿಯನ್ನು ತಡೆಯುವುದಕ್ಕೆಂದು ಹಾಕಿದ ಕಟ್ಟೆ ಒಡೆಯುವುದರಲ್ಲಿತ್ತು. ನಾನು ತಡೆಯಲಾರದವಳಾದೆ. ಮೆಲ್ಲಗೆ ಕೊಟಡಿಯ ಬಾಗಿಲನ್ನು ತೆರೆದು ಹೊರಗೆ ಬಂದೆ. ಬೆಳ್ದಿಂಗಳ ಕ್ಷೀರಸಾಗರದಲ್ಲಿ ಜಗತ್ತು ದಟ್ಟವಾದ ಬನಗಳಿಂದಲೂ, ಸಾವಿರಾರು ತಾರೆಗಳಿಂದಲೂ, ಆಕಾಶದಲ್ಲಿ ಅಲ್ಲಲ್ಲಿ ತೇಲುತ್ತಿದ್ದ ಕಿರಿದಾದ ಬಿಳಿಮುಗಿಲ ರಾಶಿಗಳಿಂದಲೂ ಶೋಭಿಸುತ್ತ ಪ್ರೇಯಸಿಯನ್ನು ನಿರೀಕ್ಷಿಸುವ ಪ್ರಣಯಿಯಂತೆ ರಾರಾಜಿಸಿತ್ತು. ನನ್ನೆದೆಯ ಸರೋವರವು ಅಲ್ಲೋಲಕಲ್ಲೋಲವಾಯಿತು. ಮಹಡಿಯ ಕಡೆಗೆ ನೋಡಿದೆ. ಭಾವನವರ ಕೊಟಡಿಯಲ್ಲಿ ಇನ್ನೂ ದೀಪ ಉರಿಯುತ್ತಿತ್ತು. ನನಗೆ ಪರಮಾಶ್ಚರ್ಯವಾಯಿತು. ಅವರೇಕೆ ಇಷ್ಟು ಹೊತ್ತಿನಲ್ಲಿ ಎಚ್ಚರವಾಗಿದ್ದಾರೆ? ಅವರೂ ನನ್ನಂತೆಯೇ ಇರಬಾರದೇಕೆ? ನನಗಾಗಿ ಕಾಯುತ್ತಿರುವರೆಂದೇ ನಿರ್ಣಯಿಸಿದೆ. ಅವರ ಕೊಟಡಿಯಲ್ಲಿ ದೀಪವಾರಿದ್ದ ಪಕ್ಷದಲ್ಲಿ ಮರಳಿ ಹೋಗಿ ಮಲಗಿಕೊಳ್ಳುತ್ತಿದ್ದೆ.

/ ಮರಳಿ ನನ್ನ ಕೋಣೆಗೆ ಬಂದೆ. ಮೈ ಬೆವರುತ್ತಿತ್ತು. ದೇಹ ಸ್ವಲ್ಪ ನಡಗುತ್ತಿತ್ತು. ಮನಸ್ಸು ಹುಚ್ಚು ಹುಚ್ಚಾಗಿತ್ತು. ವಿವೇಕ, ಅವಿವೇಕ, ಮಾನ, ಅಪಮಾನ, ಪಾಪ, ಪುಣ್ಯ ಯಾವುದರ ಗೊಡವೆಯೂ ಅದಕ್ಕೆ ಬೇಕಾಗಿರಲಿಲ್ಲ. ಕಡುಬೇಸಗೆಯ ಸುಡುಬಿಸಿಲಲ್ಲಿ ಒಣಗಿದ ಬಿದಿರುಮೆಳೆಗೆ ಬೆಂಕಿ ಬಿದ್ದಂತೆ ನನ್ನ ಚಿತ್ತದಲ್ಲಿ ರಾಗೋದ್ರೇಕವು ಭೀಷಣವಾಗಿತ್ತು. ಧರ್ಮಬುದ್ಧಿ ಕುರುಡಾಯಿತು. ಮರ್ದನಮಾಡಿದ್ದೇನೆಂದು ತಿಳಿದಿದ್ದ ದುರಾಶಾಪ್ರೇತವು ಮಣಿಗಣಭೂಷಿತವಾದ ಸರ್ಪರಾಜನ ಸುಂದರ ಫಣಾಮಂಡಲದಂತೆ ನನ್ನನ್ನು ಮನಮೋಹಿಸಿ ಆಕರ್ಷಿಸಿತು.

ದೀಪವನ್ನು ಆರಿಸಿದೆ. ಓದಿ ಇಟ್ಟಿದ್ದ ಪುಸ್ತಕವನ್ನು ಕೈಲಿ ತೆಗೆದುಕೊಂಡೆ. ಅಭೀಷ್ಟವು ಸಿದ್ಧಿಸದಿದ್ದರೆ ದುರಭಿಸಂಧಿಯನ್ನಾದರೂ ಮರೆಮಾಡುವುದೆಂದು ಪುಸ್ತಕವನ್ನು ಕೈಲಿ ತೆಗೆದುಕೊಂಡೆ. ಮಹಡಿಯ ಮೆಟ್ಟಲುಗಳನ್ನು ಸದ್ದಾಗದಂತೆ ಹತ್ತಿದೆ. ಸುತ್ತಲೂ ಕಿವಿಗೊಟ್ಟು ಆಲಿಸಿದೆ. ಎಲ್ಲಿಯೂ ಮೌನ. ಎದೆ ಹೊಡೆದುಕೊಳ್ಳುತ್ತಿತ್ತು. ಬೆವರು

ಸುರಿಯುತ್ತಿತ್ತು. ಬಿಸುಸುಯ್ಲು ಬಿರುಸಾಯಿತು. ಹೆಜ್ಜೆ ಹೆಜ್ಜೆಗೂ "ಬೇಡ, ಬೇಡ" ಎಂದುಕೊಂಡೆ. ಹಾಗೆಂದುಕೊಳ್ಳುತ್ತಲೇ ಮುಂದು ವರಿದೆ. ಕೊಟಡಿಯ ಬಾಗಿಲು ಮುಚ್ಚಿತ್ತು. ಅದರ ಸಂದಿಯಿಂದ ದೀಪದ ಕಿರಣವೊಂದು ಹೊರಗೆ ಬಂದು ಜ್ಯೋತಿಸ್ಸೂತ್ರದಂತೆ ರಂಜಿಸಿತ್ತು. ಅದೂ "ಬೇಡ, ಬೇಡ" ಎಂದು ಹೇಳುವ ಧರ್ಮಬುದ್ಧಿಯಂತೆ ತೋರಿತು. ಆದರೆ ಸುತ್ತಲಿರುವ ಕತ್ತಲೆ ಅಧರ್ಮಬುದ್ಧಿಯಂತೆ "ಹೆದರಬೇಡ, ಮುಂದೆ ನಡೆ!" ಎನ್ನುವಂತೆ ತೋರಿತು. ಬಾಗಿಲನ್ನು ಸೇರಿ ನಿಂತೆ. ತಡ ಮಾಡಿದರೆ ಎಲ್ಲಿ ಧರ್ಮಬುದ್ಧಿಯೇ ಜಯಿಸಿಬಿಡುವುದೋ ಎಂದು ಹೆದರಿ ಬಾಗಿಲನ್ನು ನೂಕಿದೆ. ಬಾಗಿಲು ತೆರೆಯಿತು.

ಭಾವನವರು ಕುರ್ಚಿಯಮೇಲೆ ಕುಳಿತು ಮೇಜಿನ ಮೇಲಿದ್ದ ದೀಪದ ಬೆಳಕಿನಲ್ಲಿ ಮನಸ್ಸಿನಲ್ಲಿಯೇ ಓದಿಕೊಳ್ಳುತ್ತಿದ್ದರು. ಓದುವು ದರಲ್ಲಿ ಮಗ್ನರಾಗಿದ್ದರು. ಬಾಗಿಲು ತೆರೆದುದನ್ನೂ ಗಮನಿಸಲಿಲ್ಲ. ನಾನು "ಅಯ್ಯೋ! ನಾನೇಕೆ ಬಂದೆ? ಏನು ಕೆಲಸ ಮಾಡಿದೆ?" ಎಂದುಕೊಂಡೆ. ಮತ್ತೆ ಧೈರ್ಯ ತಂದುಕೊಂಡು ಕೈಲಿದ್ದ ಪುಸ್ತಕವನ್ನು ಅವರು ಕಾಣು ವಂತೆ, ಮುಂದೆ ಕಾಣುವಂತೆ ಹಿಡಿದುಕೊಂಡು ಒಳಗೆ ಹೋದೆ. ಅವರು ಓದುವುದನ್ನು ನಿಲ್ಲಿಸಿ ಮೆಲ್ಲಗೆ, ಬಹು ಮೆಲ್ಲಗೆ, ಅತ್ಯಂತ ನಿಧಾನವಾಗಿ ತಲೆಯೆತ್ತಿದರು! ನೋಡಿದೆ! ಇದೇನು? ನಮ್ಮ ಭಾವನವರಲ್ಲ; ನಾಲ್ಕು ವರ್ಷಗಳ ಹಿಂದೆ ಮೃತರಾಗಿ ಹೋದ ನನ್ನ ಪತಿ! ಅದೇ ಮುಖ; ಅದೇ ಕಣ್ಣು; ಅದೇ ಕ್ರಾಪು! ಸ್ವಲ್ಪ ನಗುತ್ತಿದ್ದಾರೆ! ಇಲ್ಲ! ಹಲ್ಲುಕಡಿಯು ತ್ತಿದ್ದಾರೆ! ನಾನು ಮರವಟ್ಟುಹೋದೆ. ನನ್ನ ಪತಿಯಲ್ಲ; ನನ್ನ ದೇವರು, ಭಾವನವರು ಎಂದು ತಿಳಿಯಲು ಬಹಳ ಪ್ರಯತ್ನಪಟ್ಟೆ. ಆಗಲಿಲ್ಲ. ಪುನಃ ನೋಡಿದೆ! ನನ್ನ ಪತಿ ಮೆಲ್ಲಗೆ ಕುರ್ಚಿಯಿಂದ ಎದ್ದರು. ಇದ್ದಕ್ಕಿ ದ್ದಂತೆ ಆಕಾರವು ವಿಕಾರವಾಯಿತು, ಅಸ್ಥಿಪಂಜರದಂತಾಯಿತು. ನನಗೆ ಸಿಡಿಲು ಬಡಿದಂತಾಗಿ "ಅಯ್ಯೋ! ಭಾವ! ಭಾವ!" ಎಂದು ಕೂಗಿ ಕೊಂಡು ಬಿದ್ದು ಮೂರ್ಛೆಹೋದೆ.

ಮುಂದೇನಾಯಿತೋ ನನಗೆ ತಿಳಿಯಲಿಲ್ಲ. ಮರುದಿನ ಬೆಳಗ್ಗೆ ನಾನು ಹಾಸಿಗೆಯಮೇಲೆ ಭಯಜ್ವರದಿಂದ ಮಲಗಿದ್ದೆ. ಕಣ್ತೆರೆದಾಗ

ನಮ್ಮ ಭಾವನವರು ಎದುರಿಗೇ ಕುರ್ಚಿಯಮೇಲೆ ಕುಳಿತುಕೊಂಡು ಅತ್ತೆಯವರೊಡನೆ ಮಾತಾಡುತ್ತಿದ್ದರು. ನಾನು ಕಣ್ದೆರೆದುದನ್ನು ನೋಡಿ "ಅದೇಕಮ್ಮಾ, ರಾತ್ರಿ ಹಾಗೆ ಕೂಗಿಕೊಂಡು ಬಿದ್ದೆ?" ಎಂದರು. ಅವರ ಧ್ವನಿ ರಹಸ್ಯಗಳನ್ನೆಲ್ಲ ತಿಳಿದಿದ್ದರೂ ಸರ್ವ ಪಾಪಗಳನ್ನೂ ಮನ್ನಿಸುವ ಪರಮಾತ್ಮನ ಕರುಣಾವಾಣಿಯಂತಿತ್ತು.

"ಒಂದು ಪದ್ಯಕ್ಕೆ ಅರ್ಥವಾಗಲಿಲ್ಲ. ನಿಮ್ಮನ್ನು ಕೇಳೋಣ ಎಂದು ಬಂದೆ!" ಎಂದೆನು. ನನ್ನದು ಅಪರಾಧಿಯ ಧ್ವನಿಯಾಗಿತ್ತು.

"'ನೀನು ಬಂದುದೇತಕ್ಕೆ?' ಎಂದು ಕೇಳಲಿಲ್ಲ. 'ಕೂಗಿಕೊಂಡಿದ್ದೇಕೆ?' ಎಂದು ಕೇಳಿದೆ."

ನಾನು ಕೊಟಡಿಯಲ್ಲಿ ಕಂಡುದನ್ನೆಲ್ಲ ಮುಚ್ಚುಮರೆಮಾಡದೆ ಹೇಳಿದೆ. ಭಾವನವರು ನಗುತ್ತ "ಅಯ್ಯೋ! ನೀನು ಬಂದೆಯಲ್ಲಾ ಎಂದು ನಾನೇ ಕುರ್ಚಿಯಿಂದ ಎದ್ದೆನು. ಹಾಗೆ ಕಿಟ್ಟನೆ ಕಿರಿಚಿಕೊಂಡು ಬೀಳುವುದೇ? ಯಾರಾದರೂ ಏನೆಂದುಕೊಂಡಾರು? ಹಾಗೆಲ್ಲ ಹೆದರಿಕೊಳ್ಳುವುದೇ?" ಎಂದು ಇದ್ದಕ್ಕಿದ್ದಂತೆ ಗಂಭೀರವಾಗಿ ಯಾವುದೋ ಚಿಂತೆಯಲ್ಲಿ ಮುಳುಗಿದರು.

ಪ್ರಾತಃಸೂರ್ಯನ ಚಿನ್ನದ ಕಿರಣಗಳು ಕಿಟಿಕಿಯಿಂದ ಪ್ರವೇಶಿಸಿ ಭಾವನವರ ಮುಖದಮೇಲೆ ಮುಗ್ಧವಾಗಿ ನಲಿದಾಡುತ್ತಿದ್ದುವು. ನಾನು ಆ ಪವಿತ್ರ ಮುಖಮಂಡಲವನ್ನೇ ನೋಡುತ್ತಾ "ನನ್ನ ದೇವರೇ, ನಿನಗೆ ಸಹಸ್ರ ನಮಸ್ಕಾರ!" ಎಂದು ಮನಸ್ಸಿನಲ್ಲಿಯೇ ಕೈಮುಗಿದೆ.

---

# ಸಾಲದ ಮಗು

"ಸುಬ್ಬಾ! ಸುಬ್ಬಾ! ಏ ಸುಬ್ಬಾ!"

ಮಳೆಗಾಲ. ಕಾರಿರುಳು. ಕತ್ತಲು ಹೆಪ್ಪುಗಟ್ಟಿಕೊಂಡಿತ್ತು. ಜಗತ್ತೆಲ್ಲ ಮಸಿಯಲ್ಲಿ ಅಳಿಸಿಹೋದಂತಿತ್ತು. ತಡೆಯಿಲ್ಲದೆ ಜಡಿಮಳೆ ಜೋ ಎಂದು ಬೀಳುತ್ತಿತ್ತು. ಬಿರುಸಾದ ಗಾಳಿ ಒಂದೊಂದುಸಾರಿ ಭರದಿಂದ ಬೀಸುವುದು; ಒಮ್ಮೆ ಮುಗ್ಗರಿಸಿ ನಿಲ್ಲುವುದು.

ಮಲೆನಾಡಿನ ಕಾಡುತುಂಬಿದ ಮಲೆಗಳು ಆ ಕಾರ್ಗತ್ತಲೆಯಲ್ಲಿ ರೂಪುರೇಖೆ ಕೂಡ ಕಾಣದಂತೆ ನಿಃಶೇಷವಾಗಿ ಮಾಯವಾಗಿದ್ದುವು. ಬಿರುಸಾಗಿ ಗಾಳಿ ಬೀಸಿದಾಗ ಅರಣ್ಯವೆಲ್ಲ ಹೋ ಎಂದು ಗರ್ಜಿಸಿದಂತಾಗುವುದು. ಗಾಳಿ ಮೃದುವಾದಾಗ ಕಾಡಿನ ಮರಗಳ ಮೇಲೆಯೂ ಮನೆಯ ಮುಂದಿನ ಅಡಕೆ ಬಾಳೆಯ ತೋಟದ ಮೇಲೆಯೂ ಮನೆಗೆ ಹೊದಿಸಿದ ಹೆಂಚುಗಳ ಮೇಲೆಯೂ ತೋರಹನಿಗಳು ಬಿದ್ದು ಬಿದ್ದು ಚಟ್ ಪಟ್ ಟಣ್ ಟಿಣ್, ಪಟ್ ಚಟ್, ಬರ್ರ್ ಸರ್ರ್ ಎಂದು ನಾನಾ ವಿಧವಾಗಿ ವಿಷಣ್ಣವಾಗಿ ರವ ಮಾಡುವುವು. ಆ ಮಳೆಗಾಳಿಗಳ ಚಿಟಮಿಟಿಯ ನಡುವೆ ಸಾವಿರಾರು ಕಪ್ಪೆಗಳು ಹತ್ತು ದಿಕ್ಕುಗಳಿಂದಲೂ ವಟಗುಟ್ಟುತ್ತ ತಲೆ ಚಿಟ್ಟುಹಿಡಿಸುತ್ತಿದ್ದುವು. ಅವುಗಳ ಜೊತೆಗೆ ಕೆಲವು ನಿಶಾಚರ ವನ್ಯ ಕ್ರಿಮಿಗಳು ಮರದ ಪೊಟರೆಗಳಲ್ಲಿ ಕುಳಿತು ಕರ್ಕಶವಾಗಿ ಕೀರುತ್ತಿದ್ದುವು. ಮನೆಯ ಬಳಿ ಇದ್ದ ತೆಂಗಿನಮರಗಳಲ್ಲಿ ಗರಿಗಳು ಗಾಳಿಗೆ ಚಿರಮರ್ಮರ ನಾದಗೈದು ಸದ್ದಿಗೆ ಸದ್ದನ್ನು ಪೇರಿಸುತ್ತಿದ್ದುವು. ಆಕಾಶದಲ್ಲಿ ಮುಗಿಲು ಕವಿದು ಕುರುಡುಗತ್ತಲೆ ತುಂಬಿತ್ತು. ಒಂದೊಂದುಸಾರಿ ಇರುಳಿನ ಗುಟ್ಟನ್ನು ತಿಳಿಯಲೋಸುಗ ಹಗಲು ಇಣಿಕಿತೋ ಎಂಬಂತೆ ಬಳ್ಳಿ ಮಿಂಚು ಮುಗಿಲುಗಳ ಸಂಧಿಯಲ್ಲಿ ನಾಗರಹಾವಿನ ನಾಲಗೆಯಂತೆ ಚುರುಚುರುಗುಟ್ಟಿ ಹೊಳೆದು ಕಣ್ಮರೆಯಾಗುತ್ತಿತ್ತು. ಜಗತ್ತು ನಾದಮಯ, ತಿಮಿರಮಯ, ವರ್ಷಮಯವಾಗಿತ್ತು. ಮನೆಯ

ಸುತ್ತಲೂ ನೀರ್ಕಾಲುವೆಗಳೂ ತೊರೆಗಳೂ ಕೆರಳಿದ ಸಿಂಹಗಳಂತೆ ಭೋರ್ಗರೆದು ಹರಿಯುತ್ತಿದ್ದುವು. ಗುಡುಗು ದಿಗಂತದಿಂದ ದಿಗಂತದ ವರೆಗೆ ಉರುಳುತ್ತಿತ್ತು. ಆ ಮಳೆ, ಆ ಗಾಳಿ, ಆ ನಿರಂತರ ನಾದ, ಆ ಕಾರ್ಗಾಲದ ಚಳಿ ಇವುಗಳಲ್ಲಿ ಮನೆಯೊಳಗೆ ಬೆಚ್ಚಗೆ ಮಲಗಿಕೊಳ್ಳುವ ಯಾರಿಗೆ ತಾನೇ ನಿದ್ದೆ ಬರುವುದಿಲ್ಲ? ಮನೆಯಲ್ಲಿ ಎಲ್ಲರೂ ಗಾಢನಿದ್ರೆ ಯಲ್ಲಿದ್ದರು. ಹೀಗಿರಲು ಒಂದುಸಾರಿ ಗಾಳಿ ಭಯಂಕರವಾಗಿ ಬೀಸಿತು; ಮಳೆ ಭಯಂಕರವಾಗಿ ಬಿತ್ತು; ಮಿಂಚು ಭಯಂಕರವಾಗಿ ಮಿಂಚಿತು; ಕೂಡಲೇ ಭಯಂಕರ ಭಯಾನಕವಾಗಿ ಸಿಡಿಲೆರಗಿತು. ಬ್ರಹ್ಮಾಂಡವೇ ಕೆಳಗೆ ಬಿದ್ದು ಗಾಜಿನ ಬುರುಡೆಯಂತೆ ಪಟಪಟನೆ ಪುಡಿಯಾಯಿತೋ ಎಂಬಂತೆ ಸಿಡಿಲೆರಗಿತು. ಗೌಡರಿಗೆ ಧಿಗಿಲ್ಲೆಂದು ಎಚ್ಚರವಾಯಿತು.

"ಸುಬ್ಬಾ! ಸುಬ್ಬಾ! ಏ ಸುಬ್ಬಾ!" ಎಂದು ಕೂಗಿ ಕರೆದರು.

ಸುಬ್ಬನಿಗೆ ಎಚ್ಚರವಾಗಲಿಲ್ಲ. ಅವನು ಕೆಳಜಗಲಿಯ ಒಂದು ಮೂಲೆಯಲ್ಲಿ ಯಾರೋ ದಾನಮಾಡಿದ್ದ ಎರಡು ಮೂರು ಚಿಂದಿ ಕಂಬಳಿ ಗಳನ್ನು ಬಲವಾಗಿ ಸುತ್ತಿಕೊಂಡು ಹೆದೆಯೇರಿಸಿದ ಬಿಲ್ಲಿನಂತೆ ಬಾಗಿ ಬಿದ್ದಿದ್ದನು. ಬಹಳ ಚಿಕ್ಕವನಾದ ಅವನು ಆ ದಿನವೆಲ್ಲಾ ಗದ್ದೆಯಲ್ಲಿ ದೊಡ್ಡವರೊಡನೆ ಕೆಲಸಮಾಡಿ ದಣಿದಿದ್ದನು. ಅನಾಥರಿಗೆ ಪರಮಜನನಿ ಯಾದ ನಿದ್ರಾದೇವಿಯ ಮಡಿಲಲ್ಲಿ ಆ ಪರದೇಶಿ ಬಾಲಕನು ಮುರವಟ್ಟು ಬಿದ್ದಿದ್ದನು.

ಗೌಡರಿಗೆ ರೇಗಿತು. ಎರಡು ಮೂರು ಸಲ ಕೂಗಿದರು. ಆ ಮಳೆಯ ಗಲಭೆಯಲ್ಲಿ ಅವರ ಧ್ವನಿ ಅವರಿಗೇ ಕೇಳಿಸುವಂತಿರಲಿಲ್ಲ. ಆದರೂ ರೇಗಿದರು. ಹಾಸಿಗೆಯಿಂದೆದ್ದು ಒಂದು ಬೆತ್ತ ತೆಗೆದುಕೊಂಡು ಮೇಲು ಜಗಲಿಯಿಂದ ಕೆಳಗಿಳಿದರು.

ಗೌಡರು ಮನೆಯ ಯಜಮಾನರು. ಶ್ರೀಮಂತರು. ಆ ಗ್ರಾಮ ಕ್ಕೆಲ್ಲಾ ಒಡೆಯರು. ಕಠೋರಸ್ವಭಾವದವರು. ಅವರಿಗೆ ವಯಸ್ಸು ಅರುವತ್ತರ ಮೇಲಾಗಿತ್ತು. ಮೂರು ಮದುವೆಗಳಾಗಿದ್ದುವು. ನಾಲ್ಕೈದು ಮನೆತನಗಳಿಗೆ ಹೆಚ್ಚು ಬಡ್ಡಿಯಮೇಲೆ ಸಾಲ ಕೊಟ್ಟು ಅವುಗಳನ್ನು ಹಾಳುಮಾಡಿದರು. ಅವರನ್ನು ಕಂಡರೆ ಎಲ್ಲರಿಗೂ ಹುಲಿಯನ್ನು ಕಂಡಂತೆ

ಭೀತಿ. ಗೌಡರು ಆ ಭೀತಿಯನ್ನು ತನಗೆ ತೋರಿಸುವ ಗೌರವವೆಂದು ತಿಳಿದುಕೊಂಡಿದ್ದರು. ದಿನವೂ ಬ್ರಾಂಡಿ ಕುಡಿಯದೆ ಅವರಿಗೆ ನಿದ್ದೆ ಬರುತ್ತಿರಲಿಲ್ಲ. ಆದರೆ ನಿಯಮ ನಿಷ್ಠೆಗಳಿಗೇನೂ ಕಡಿಮೆಯಿರಲಿಲ್ಲ. ಮೈತುಂಬಾ ಬೇಕಾದಷ್ಟು ನಾಮದ ಪಟ್ಟೆ ಹಾಕಿಕೊಳ್ಳುವರು. ನಿತ್ಯವೂ ಶಿವಪೂಜೆ ಮಾಡುವರು. ಅವರು ತಮ್ಮ ಕೋಣೆಯೊಳಗೆ ಕುಳಿತು ಬ್ರಾಂಡಿ ಕುಡಿಯುವಾಗ, ಬ್ರಾಂಡಿಯನ್ನು ಶೀಸೆಯಿಂದ ಗ್ಲಾಸಿಗೆ ಹಾಕುತ್ತ, ಹೊರಗಿನವರು ತಾನು ದೇವರ ಧ್ಯಾನದಲ್ಲಿರುವೆನೆಂದು ತಿಳಿದುಕೊಳ್ಳಲಿ ಎಂದೂ, ಅವರಿಗೆ ಶೀಸೆಯ ಮುಚ್ಚಳ ತೆಗೆಯುವ ಸದ್ದೂ ಬ್ರಾಂಡಿ ಹೊಯ್ಯುವ ಸದ್ದೂ ಕೇಳಿಸಬಾರದೆಂದೂ, "ಹರಿ ನಾರಾಯಣ ಹರಿ ನಾರಾಯಣ ಹರಿ ನಾರಾಯಣ ಎನು ಮನವೆ" ಎಂದು ಗಟ್ಟಿಯಾಗಿ ರಾಗದಿಂದ ಹೇಳುವರು. ಮಳೆಗಾಲದಲ್ಲಂತೂ ಬಹಳ ಹೆಚ್ಚಾಗಿ "ಹರಿ ನಾರಾಯಣ" ಮಾಡುತ್ತಿದ್ದರು.

ಸುಬ್ಬ ಎಂಟು ಹತ್ತು ವರ್ಷದ ಹುಡುಗ. ಅವನ ತಂದೆ ರಂಗನು ಗೌಡರ ಒಕ್ಕಲಾಗಿದ್ದನು. ಸುಬ್ಬನ ತಾಯಿ ಮಗನನ್ನು ಹೆತ್ತ ಎರಡು ವರ್ಷಗಳಲ್ಲಿಯೇ ತೀರಿಹೋಗಿದ್ದಳು. ರಂಗನು ಮತ್ತೊಂದು ಮದುವೆ ಮಾಡಿಕೊಳ್ಳಬೇಕೆಂದು ಬಹಳ ಪ್ರಯತ್ನಪಟ್ಟನು. ಹೆಣ್ಣೂ ಕೂಡ ಗೊತ್ತಾಯಿತು. ಆದರೆ ಅದಕ್ಕೆ ಮುನ್ನೂರು ರೂಪಾಯಿ ತೆರ ಕೊಡಬೇಕು ಎಂದು ಹೆಣ್ಣಿನವರು ಕೇಳಿದರು. ಬಡ ರಂಗನು ಒಡೆಯರಾದ ಗೌಡರ ಹತ್ತಿರ ಸಾಲ ಕೇಳಿದನು. ಗೌಡರು ಆಗಾಗಲೇ ರಂಗನಮೇಲೆ ಇದ್ದ ಮುನ್ನೂರು ರೂಪಾಯಿಗಳ ಸಾಲವನ್ನು ತೋರಿಸಿ ಇನ್ನು ಒಂದು ಕಾಸನ್ನೂ ಕೊಡುವುದಕ್ಕಾಗುವುದಿಲ್ಲ ಎಂದರು. ಹೀಗಾಗಿ ರಂಗನ ಮದುವೆ ನಿಂತಿತು. ಕೆಲದಿನಗಳಲ್ಲಿಯೇ ರಂಗನಿಗೆ ರೇಷ್ಮೆ ಕಾಯಿಲೆ ಬಂದು ತೀರಿಹೋದನು. ಗೌಡರು ತಮ್ಮ ಸಾಲಕ್ಕಾಗಿ ಅವನ ಮಗ ಸುಬ್ಬನನ್ನು ಮನೆಯಲ್ಲಿ ಜೀತದಾಳನ್ನಾಗಿ ಮಾಡಿ ಇಟ್ಟುಕೊಂಡು ಅಗಸರು ಕತ್ತೆಗಳಮೇಲೆ ಹೊರೆ ಹೇರುವಂತೆ ಆ ಬಾಲಕನಮೇಲೆ ಕೆಲಸಗಳನ್ನು ಹೇರತೊಡಗಿದರು. ಸುಬ್ಬನ ಕೈಲಾಗಲಿ, ಆಗದೇಹೋಗಲಿ, ಕೆಲಸ ಮಾಡಲೇಬೇಕಿತ್ತು. ಗೌಡರೂ ಆಗಾಗ್ಗೆ ಹುಡುಗನಿಗೆ ಬುದ್ಧಿ ಬರಲಿ ಎಂದು ಹೊಡೆಯುತ್ತಿದ್ದರು.

ಸುಬ್ಬನು ದಿನದಿನವೂ ಕೃಶನಾಗುತ್ತಿದ್ದನು. ಅವನೆಲ್ಲಿಯಾದರೂ ಜ್ವರ ಬಂದು ಮಲಗಿಕೊಂಡರೆ ಗೌಡರು ಎರಡು ಗುದ್ದು ಹೇರಿ ಕೆಲಸಕ್ಕೆ ದಬ್ಬುತ್ತಿದ್ದರು. ಆ ಹುಡುಗನು ಜ್ವರದ ಚಳಿಯಲ್ಲಿ ನಡುಗುತ್ತ ಕೆಲಸಕ್ಕೆ ಹೋಗುವನು. ಕೆಲವುಸಾರಿ ದೊಡ್ಡವರಾದ ಇತರ ಆಳುಗಳು ಸುಬ್ಬನ ಮೇಲಣ ಕನಿಕರದಿಂದ ಅವನನ್ನು ಮಲಗಿಕೊಳ್ಳುವಂತೆ ಹೇಳಿ ತಾವೇ ಅವನ ಕೆಲಸವನ್ನೂ ಮಾಡುತ್ತಿದ್ದರು. ಆದರೆ ಗೌಡರು ಬರುವ ಸೂಚನೆ ತಿಳಿದಕೂಡಲೆ ಸುಬ್ಬನನ್ನು ಎಚ್ಚರಿಸುವರು. ಅವನು ಜ್ವರದ ಭರದಲ್ಲಿ ತತ್ತರಿಸುತ್ತ ಎದ್ದು ಕೆಲಸಕ್ಕೆ ಕೈ ಹಾಕುತ್ತಿದ್ದನು. ಹೀಗೆ ಆ ಅನಾಥನು ದಿನದಿನವೂ ಸುಡುಗಾಡಿಗೆ ಸಮೀಪವಾಗುತ್ತಿದ್ದನು.

ಗೌಡರು ಕರೆದಾಗ ಸುಬ್ಬ ನಿದ್ದೆಮಾಡುತ್ತಿದ್ದುದೇನೋ ಹೌದು. ಆದರೆ ಅನಾರೋಗ್ಯವಿರುವವರಿಗೆ ಕನಸಿಲ್ಲದ ನಿದ್ದೆ ಬರುವುದೇ ದುರ್ಲಭ. ಸುಬ್ಬ ಏನೇನೋ ಕನಸು ಕಾಣುತ್ತಿದ್ದನು. ಜಾಗ್ರದವಸ್ಥೆಯಲ್ಲಿ ತನಗಿಲ್ಲದ ಸುಖಗಳನ್ನು ಕನಸಿನಲ್ಲಿ ಕಂಡುಂಡು ನಲಿಯುತ್ತಿದ್ದನು. ನನಸಿನಲ್ಲಿ ಲಭಿಸದ ಮತ್ತು ಕೈಗೂಡದ ಬಯಕೆಗಳು ಕನಸಿನಲ್ಲಿ ಕೈಗೂಡುವುದು ಸ್ವಭಾವ. ಸುಬ್ಬನು ಕನಸಿನಲ್ಲಿ ತನ್ನ ತಂದೆ ತಾಯಿಗಳೊಡನೆ ಒಂದು ದಿವ್ಯವಾದ ಸೌಧದಲ್ಲಿ ನಲಿಯುತ್ತಿದ್ದನು. ಅಲ್ಲಿ ಬೇಕಾದಷ್ಟು ಉಡುಗೆತೊಡುಗೆಗಳನ್ನು ಧರಿಸಿದ್ದನು. ಅಲ್ಲಿ ಅವನು ಕೆಲಸಮಾಡ ಬೇಕಾಗಿಯೇ ಇರಲಿಲ್ಲ. ಕೈಗೆ ಕಾಲಿಗೆ ಆಳುಗಳಿದ್ದರು. ಜೊತೆಗೆ ಆಡಲು ಹುಡುಗರಿದ್ದರು. ವಿಧವಿಧವಾದ ಭಕ್ಷ್ಯಭೋಜ್ಯಗಳು ಅವನು ತಿಂದು ತಿಂದು ಮಿಗುವಷ್ಟಿದ್ದುವು. ಗೌಡರು ಬೆತ್ತದಿಂದ ರಪ್ಪರಪ್ಪನೆ ಹೊಡೆದಾಗ ಅವನು ಚೀರಿ ಹಾರಿಬಿದ್ದನು. ಕಣ್ದೆರೆದು ನೋಡಿದರೆ ಲಾಟೀನಿನ ಬೆಳಕಿನಲ್ಲಿ ಗೌಡರ ರುದ್ರಮೂರ್ತಿ! ಸುಬ್ಬ "ಅಯ್ಯೋ! ದಮ್ಮಯ್ಯ!" ಎಂದು ಸುತ್ತಿದ್ದ ಕಂಬಳಿಯನ್ನು ಬೇಗಬೇಗನೆ ಬಿಚ್ಚಿಕೊಂಡು ಎದ್ದನು.

ಗೌಡರು, "ಏನೋ ಕಳ್ಳಮಗನೇ, ಕರೆದರೆ ಸುಳ್ಳು ನಿದ್ದೆಮಾಡಿಕೊಂಡು ಮಲಗಿದ್ದೀಯಾ?" ಎಂದು ಮತ್ತೊಂದು ಏಟು ಹೊಡೆದರು. ಸುಬ್ಬ ಒರಲುತ್ತಾ ಕಣ್ಣೀರು ಸುರಿಸುತ್ತಾ ನಡುಗುತ್ತಾ ನಿಂತನು. ಅವನಿಗೆ ನೋವಲ್ಲದೆ ಬೇರೆ ಯಾವುದೂ ಸರಿಯಾಗಿ ಅರ್ಥವಾಗಲೇ ಇಲ್ಲ.

ಗೌಡರು ಕರ್ಠೋರಧ್ವನಿಯಿಂದ "ಹೋಗೋ! ನಡಿಯೋ! ಗದ್ದೇಲಿ ಹಾಕಿದ್ದ ಕೂಣಿ ನೋಡಿಕೊಂಡು ಬಾರೊ" ಎಂದು ಮತ್ತೆ ಬೆತ್ತ ಎತ್ತಿದರು.

ಸುಬ್ಬ "ಹೋಗ್ತೀನಯ್ಯಾ" ಎಂದು ದೀರ್ಘವಾಗಿ ಕೂಗಿದನು.

ಮಳೆಗಾಲದಲ್ಲಿ ಹತ್ತುಮೀನಿನ (ಮೀನು ಹತ್ತುವ) ಸಮಯದಲ್ಲಿ ರೈತರು ಕೂಣಿ ಹಾಕಿ ಮೀನು ಹಿಡಿಯುತ್ತಾರೆ. ದಿನಕ್ಕೆ ಏಳೆಂಟು ಬುಟ್ಟಿಗಿಂತಲೂ ಹೆಚ್ಚಾಗಿ ಮೀನು ಸಿಕ್ಕುತ್ತವೆ. ಆ ದಿನ ಹಗಲಿನಲ್ಲಿಯೇ ಗೌಡರು ನಾಲ್ಕೈದು ಬುಟ್ಟಿ ಮೀನು ಸಿಕ್ಕಿದ್ದನ್ನು ನೋಡಿದ್ದರು. ರಾತ್ರಿ ಕೂಣಿ ತುಂಬಿ ಮೀನು ಉಕ್ಕಿಹೋಗುತ್ತವೆ. ಅಥವಾ ನೀರಿನ ಪ್ರವಾಹ ದಲ್ಲಿ ಕೂಣಿ ಕೊಚ್ಚಿಕೊಂಡು ಹೋಗುತ್ತದೆ ಎಂದು ಅವರಿಗೆ ಭಯ. ಅದಕ್ಕಾಗಿಯೇ ನಡುರಾತ್ರಿಯಲ್ಲಿ ಆ ಪುಟ್ಟ ಬಾಲಕನನ್ನು ಹೊಡೆದು ಎಬ್ಬಿಸಿದ್ದು.

ಸುಬ್ಬನು ದೊಡ್ಡದೊಂದು ಮೀನುಬುಟ್ಟಿ ಹೊತ್ತುಕೊಂಡು ಕೈಯಲ್ಲಿ ಲಾಟೀನು ಹಿಡಿದುಕೊಂಡು ಕಂಬಳಿಕೊಪ್ಪೆ ಹಾಕಿಕೊಂಡು ಹೊರಟನು. ಗೌಡರು ಮರಳಿ ಹೋಗಿ ಬೆಚ್ಚಗೆ ಮಲಗಿ ನಿದ್ದೆಮಾಡಿದರು.

ಮಳೆ ಸುರಿಯುತ್ತಲೇ ಇತ್ತು. ಗಾಳಿ ಮಿಂಚು ಗುಡುಗುಗಳೂ ನಿಂತಿರಲಿಲ್ಲ. ಕತ್ತಲೆ ಕ್ರೂರವಾಗಿತ್ತು. ಹಾದಿಯು ತುಂಬಾ ಕೆಸರು. ಸುಬ್ಬನು ಕಾಲಿಟ್ಟಂತೆಲ್ಲಾ ಪಿಚಪಿಚನೆ ಹಾರುತ್ತಿತ್ತು. ಲಾಟೀನಿಗೆ ಕೆಸರಾದರೆ ಗೌಡರು ಮತ್ತೆ ಎಲ್ಲಿ ಹೊಡೆಯುತ್ತಾರೆಯೋ ಎಂದು ಹೆದರಿ ಅದನ್ನು ಶಕ್ತಿಮೀರಿ ಎತ್ತಿ ಹಿಡಿದುಕೊಂಡೇ ನಡೆದನು. ಕೂಣಿ ಇದ್ದ ಸ್ಥಳ ಎಂಟುಹತ್ತು ಫರ್ಲಾಂಗುಗಳಷ್ಟು ದೂರವಾಗಿತ್ತು. ಸುಬ್ಬ ನಡೆದನು. ರುದ್ರಪ್ರಕೃತಿಯು ಹೊರತು ಮತ್ತೊಂದು ಜೀವಜಂತು ಹೊರಗಿರಲಿಲ್ಲ. ಹೋಗುತ್ತ ಸುಬ್ಬನು ಒಂದು ಗದ್ದೆ ಅಂಚಿನಿಂದ ಮತ್ತೊಂದು ಗದ್ದೆ ಅಂಚಿಗೆ ಹಾರುತ್ತಿದ್ದಾಗ ಕೆಸರಿನಲ್ಲಿ ಕಾಲು ಜಾರಿ ಬಿದ್ದು ಲಾಟೀನು ಒಡೆದುಹೋಯಿತು. ದೀಪ ನಂದಿತು. ಸುಬ್ಬ ಕಗ್ಗತ್ತಲಲ್ಲಿ ಮುಳುಗಿ ಕರಗಿಯೇ ಹೋದಂತಾದನು. ಗದ್ದೆಯಂಚಿನ ಮೇಲೆ ಕುಳಿತು ಅತ್ತನು, ಲಾಟೀನು ಒಡೆದುದಕ್ಕಾಗಿ. ಅತ್ತು ಅತ್ತು,

ಮನೆಗೆ ಮೀನು ತಾರದೆ ಹಿಂದಿರುಗಿದರೆ ಏನುಗತಿಯಾಗುವುದೋ ಎಂದು ಹೆದರಿ, ಮತ್ತೆ ಆ ಕತ್ತಲಲ್ಲಿಯೇ ಆ ಮಳೆಗಾಳಿಗಳ ಪ್ರಚಂಡ ಪ್ರಲಯದಲ್ಲಿ ಮುಂಬರಿದನು. ಮಿಂಚಿನ ಬೆಳಕಿನಲ್ಲಿ ಊಹೆಯ ಮೇಲೆಯೇ ನಡೆದು ಕೂಣಿಯಿದ್ದ ತಾವನ್ನು ಕಂಡುಹಿಡಿಯಲೆಂದು ಬೀಳುತ್ತ ಏಳುತ್ತ ಅಳುತ್ತ ಹೋದನು. ಆ ನಿಷ್ಕರುಣ ಪ್ರಕೃತಿಯ ಭಯಂಕರ ಸನ್ನಿವೇಶದಲ್ಲಿ ಬಾಲಕನು ಕಡಲಲ್ಲಿ ತೇಲುವ ಹುಲ್ಲು ಎಸಳಿನಂತೆ ತೇಲಿಹೋದನು.

ಚಳಿ ಹೆಚ್ಚಾಯಿತು. ಕಂಬಳಿಯನ್ನು ಮತ್ತಷ್ಟು ಬಲವಾಗಿ ಸುತ್ತಿಕೊಂಡನು. ನಡುನಡುವೆ ಏನನ್ನೊ ಕಂಡವನಂತೆ ಬೆಚ್ಚಿ ನಡುಗಿದನು. ಕಡೆಗೆ ಕೂಣಿಯ ಬಳಿ ಸೇರಿದನು.

ಸುಬ್ಬನು ಕೂಣಿಯ ಬಳಿ ಸೇರಿ ಕೈಯಲ್ಲಿದ್ದ ಬುಟ್ಟಿಯನ್ನು ಕೆಳಗಿಟ್ಟು, ಬಹು ಪ್ರಯಾಸದಿಂದ ಕೂಣಿಯನ್ನೆತ್ತಿದನು. ಕೂಣಿ ಮೀನಿನಿಂದ ತುಂಬಿಹೋಗಿತ್ತು. ಒಳಗೆ ಮೀನು ಚೊಳ್ ಚೊಳ್ ಎಂದು ಸದ್ದು ಮಾಡುತ್ತಿದ್ದುವು. ಕೆಲವು ಕೂಣಿಯ ಒಳಪಕ್ಕಕ್ಕೆ ಹಾರಿ ಬಡಿದು ಬೀಳುತ್ತಿದ್ದುವು. ಸುಬ್ಬ ಕೂಣಿಯನ್ನು ಎತ್ತಿ ಅಂಚಿನಮೇಲೆ ಇಟ್ಟನು. ಇಟ್ಟು ಪನ್ನೆಯನ್ನು ಈಚೆಗೆ ತೆಗೆದನು. (ಪನ್ನೆ ಎಂದರೆ ಸೀಮೆಯೆಣ್ಣೆಯನ್ನು ಶೀಸೆಗೆ ಸುರಿಯಲು ಉಪಯೋಗಿಸುವ 'ಬುದ್ಧಿವಂತ'ದಂತಹ ಒಂದು ಬಿದಿರಿನ ಕುಕ್ಕೆ. ಪನ್ನೆಯನ್ನು ಕೂಣಿಯಮೇಲೆ ಇಟ್ಟಿರುತ್ತಾರೆ.)

ಒಡನೆಯೇ ಮೀನು ತಿನ್ನಲೆಂದು ಬಂದು ಅದರೊಳಗಿದ್ದ ಒಂದು ಕೃಷ್ಣಸರ್ಪವು ಬುಸ್ಸೆಂದು ಚಿಮ್ಮಿ ಸುಬ್ಬನನ್ನು ಕಚ್ಚಿ ಓಡಿಹೋಯಿತು. ಅಷ್ಟುಹೊತ್ತಿಗೆ ಗಾಳಿ ಮಳೆಗಳು ಸ್ವಲ್ಪ ಶಮನವಾಗಿದ್ದುವು. ಸುಬ್ಬ ಕಿಟ್ಟನೆ ಚೀರಿದನು. ವಿಷವೇರಿ ಕೆಳಗೆ ಬಿದ್ದನು. ನೀರು ಭೋರೆಂದು ಹರಿಯುತ್ತಿತ್ತು. ಬೆಳೆದ ಪೈರಿನಮೇಲೆ ಆಗತಾನೇ ಕೋಪವಾರಿದ ಗಾಳಿ ಸುಯ್ಯೆಂದು ಬೀಸಿತ್ತು. ಮುಗಿಲು ಮಿಂಚುತಿತ್ತು. ಜಗಚ್ಚಕ್ರವು ಆ ಕ್ಷುದ್ರ ವಿಷಯವನ್ನು ಗಣನೆಗೆ ತಾರದೆ ತಿರುಗುತ್ತಲೇ ಇತ್ತು.

ಬೆಳಗಾದಮೇಲೆ ಗೌಡರು ಸುಬ್ಬ ಬಾರದಿದ್ದುದನ್ನು ನೋಡಿ ಬಹಳ ರೇಗಿದರು. ರಾತ್ರಿ ಕೂಣಿಗೆ ಹೋಗದೆ ಮನೆಯಲ್ಲಿಯೇ ಎಲ್ಲಿಯೋ

ಅಡಗಿರಬೇಕೆಂದು ಕೈಯಲ್ಲಿ ದೊಣ್ಣೆ ಹಿಡಿದು ಹುಡುಕಿದರು. ಎಲ್ಲಿಯೂ ಸಿಕ್ಕಲಿಲ್ಲ. ಮತ್ತೂ ರೇಗಿದರು. ಯಾರ ಮನೆಗೋ ಹೋಗಿ ಮಲಗಿರಬೇಕು ಎಂದು ಸಿಡಿಲಿದರು. ಕಡೆಗೆ ತಾವೇ ಒಬ್ಬ ಆಳನ್ನು ಜೊತೆಗೆ ಕರೆದುಕೊಂಡು ಅವನನ್ನು ಪತ್ತೆಹಚ್ಚಲು ಹೊರಟರು. ದಾರಿಯಲ್ಲಿ ಗದ್ದೆಯಂಚಿನ ಬಳಿ ಒಡೆದ ಲಾಟೀನು ಬಿದ್ದಿತ್ತು. ಅಲ್ಲಿಯೂ ರೇಗಿದರು. "ಅವನು ಸಿಕ್ಕಲಿ, ಎಲುಬು ಮುರಿಯುತ್ತೇನೆ!" ಎಂದು ಗರ್ಜಿಸಿದರು. ಮುಂದೆ ಮುಂದೆ ಹೋದರು. ಕೂಣಿ ಸಮೀಪವಾಯ್ತು! ದೂರದಿಂದಲೇ ಕೂಣಿ ಮಗುಚಿಕೊಂಡು ಅಂಚಿನಮೇಲೆ ಬಿದ್ದಿದ್ದುದನ್ನು ಕಂಡು "ಅಯ್ಯೋ, ಹಾಳು ಬಡ್ಡೀಮಗ, ಮೀನೂ ಸಿಕ್ಕದಂತೆ ಮಾಡಿದ್ದಾನಲ್ಲಾ!" ಎಂದುಕೊಂಡರು. ಇನ್ನೂ ಹತ್ತಿರ ಹೋದರು. ಸೊಂಟದೆತ್ತರ ಬೆಳೆದ ಗದ್ದೆಯ ಕೆಸಿಯ ನಡುವೆ ಕೆಸರು ಮೆತ್ತಿಕೊಂಡು ಸುಬ್ಬ ಬಿದ್ದಿದ್ದನು. ಗೌಡರಿಗೆ ಸ್ವಲ್ಪ ಗಾಬರಿಯಾಯಿತು. ಕರೆದರು. ಓ–ಕೊಳ್ಳಲಿಲ್ಲ. ಏಳಲಿಲ್ಲ. ಅಲುಗಾಡಲಿಲ್ಲ. ಜೊತೆ ಬಂದಿದ್ದ ಆಳಿನ ಕೈಯಲ್ಲಿ ಎತ್ತಲು ಹೇಳಿದರು. ಅವನು ಹೋಗಿ ಎತ್ತಿದನು. ಹೆಣವು ನಿಮಿರಿ ನಿಂತಿತು!....

ಗೌಡರು ಬಹಳ ವ್ಯಸನಪಟ್ಟುಕೊಂಡು, "ಅಂತೂ ಮುನ್ನೂರು ರೂಪಾಯಿ ಮನೆಗೆ ಬಂತು!" ಎಂದು ನಿಡುಸುಯ್ದರು....

---

# ಆದರ್ಶ ಸಾಧನೆ

ನಾನು ಮೊದಲು ಆದರ್ಶ ಸಂನ್ಯಾಸಿಯಾಗಬೇಕೆಂದಿದ್ದೆ. ಸಂನ್ಯಾಸವೇ ಆದರ್ಶಗಳಲ್ಲಿ ಅತ್ಯುತ್ತಮವಾದುದು ಎಂದು ಭಾವಿಸಿದೆ. ಆದರೆ ವಯಸ್ಸು ಸ್ವಲ್ಪ ಹೆಚ್ಚಾಗುತ್ತ ಬರಲು ಸಂನ್ಯಾಸವು ಅಸ್ವಾಭಾವಿಕವಲ್ಲವೇ ಎಂದು ಯೋಚಿಸತೊಡಗಿದೆ. ಆಮೇಲೆ ಸಂನ್ಯಾಸವು ಬೋಧಿಸುವ ತೀವ್ರ ತಪಸ್ಸೂ ಉಗ್ರ ತಿತಿಕ್ಷೆಯೂ ಸಂಪೂರ್ಣವಾಗಿ ಸ್ವಭಾವವಿರುದ್ಧ ಎಂದು ನಿರ್ಣಯಿಸಿ, ಸಂನ್ಯಾಸವು ಆದರ್ಶಗಳಲ್ಲಿ ಅತ್ಯುತ್ತಮವಾದುದೂ ಅಲ್ಲ, ಉತ್ತಮವಾದುದೂ ಅಲ್ಲ, ಕಡೆಗೆ ಆದರ್ಶವೇ ಅಲ್ಲ ಎಂದು ಸಿದ್ಧಾಂತಮಾಡಿ ಅದರ ವಜ್ರಪಂಜರದಿಂದ ಹೊರಗೆ ಬಂದೆ. ನನ್ನ ಸ್ನೇಹಿತರು ನನ್ನ ಮಾತುಗಳನ್ನು ಕೇಳಿ ವಿಸ್ಮಿತರಾದರು. ಏಕೆಂದರೆ ಮೊದಲು ಸಂನ್ಯಾಸದ ಶ್ರೇಷ್ಠತೆಯ ವಿಚಾರವಾಗಿ ಎಷ್ಟು ಉದ್ವೇಗದಿಂದ, ಎಷ್ಟು ಸಾಮರ್ಥ್ಯದಿಂದ, ಎಷ್ಟು ಶ್ರದ್ಧೆಯಿಂದ ಅವರೊಡನೆ ವಾದಿಸಿ ಬೋಧಿಸುತ್ತಿದ್ದೆನೋ ಈಗ ಅಷ್ಟೇ ಉದ್ವೇಗ, ಸಾಮರ್ಥ್ಯ, ಶ್ರದ್ಧೆಗಳಿಂದ ಅಲ್ಲದೆ, ಇನ್ನೂ ಪ್ರಬಲವಾದ ವಾಗ್ವೈಖರಿಯಿಂದ ಸಂನ್ಯಾಸಕ್ಕೆ ವಿರೋಧವಾಗಿ ಮಾತಾಡತೊಡಗಿದೆ. ಅದನ್ನು ಆಲಿಸಿ, ವಿವಾಹಪ್ರಿಯರಾಗಿದ್ದ ನನ್ನ ಮಿತ್ರರು ಇವನೇನೋ ಒಂದು ಮಾರ್ಗಕ್ಕೆ ಬರುವಹಾಗಿದೆ ಎಂದುಕೊಂಡರು.

ಆದರೆ ಅವರಿಗೆ ಆಶಾಭಂಗವಾಯಿತು. ಏಕೆಂದರೆ ನಾನು ಅವಿವಾಹಿತನಾಗಿಯೇ ಪ್ರಪಂಚದಲ್ಲಿದ್ದುಕೊಂಡು ಲೋಕೋಪಕಾರ ಮಾಡಿ ಆದರ್ಶವ್ಯಕ್ತಿ ಎನ್ನಿಸಿಕೊಳ್ಳಬೇಕೆಂದು ನಿಶ್ಚಯಿಸಿದೆ. ಸಮಯ ಸಿಕ್ಕಿದಾಗಲೆಲ್ಲ ಲೋಕೋಪಕಾರಕ್ಕೂ ವಿವಾಹಕ್ಕೂ ಪರಸ್ಪರ ವಿರೋಧವಿರುವುದೆಂದು ನನ್ನ ಗೆಳೆಯರೊಡನೆ ಪ್ರಚಂಡವಾದ ವಾದ ಹೂಡಿದೆ. ಪತ್ನೀಪುತ್ರರೇ ಮೊದಲಾದ ಸಂಸಾರದ ಬಂಧನಗಳಿದ್ದರೆ ನಿಃಸ್ವಾರ್ಥತೆಯಿಂದಲೂ ಅನನ್ಯಮನಸ್ಸಿನಿಂದಲೂ ಲೋಕಸಂಗ್ರಹಕಾರ್ಯ ಮಾಡಲು

ಅಸಾಧ್ಯ ಎಂದು ಸೋಪಪತ್ತಿಕವಾಗಿ ವಾದಿಸಿದೆ. ಮನಸ್ಸಿನಲ್ಲಿಯೇ ಮುಂದೆ ಜಗತ್ತಿನ ಧರ್ಮಚರಿತ್ರೆಯಲ್ಲಿ ನನ್ನ ಹೆಸರು ಪ್ರತಿ ಪುಟದಲ್ಲಿಯೂ ಸ್ವರ್ಣಾಕ್ಷರಗಳಲ್ಲಿ ಲಿಖಿತವಾಗುವುದೆಂದು ಹಿಗ್ಗಿದೆ.

ಆಗ ನಾನಿನ್ನೂ ವಿದ್ಯಾರ್ಥಿದಶೆಯಲ್ಲಿದ್ದೆ. ಮನೆಯವರು ನನ್ನ ಆದರ್ಶವನ್ನು ಸ್ವಲ್ಪ ಮಾತ್ರವೂ ಮನ್ನಿಸಲಿಲ್ಲ. ಒಂದು ಹೆಣ್ಣನ್ನು ಗೊತ್ತುಮಾಡಿದ್ದೇನೆ. ಬೇಸಗೆ ರಜಾ ಸಿಕ್ಕ ಕೂಡಲೇ ಬಾ, ಎಂದು ಮೊದಲಾಗಿ ನಮ್ಮ ತಂದೆ ಕಾಗದ ಬರೆದರು. ನಾನು ಮಿತ್ರರಿಗೆಲ್ಲ ಆ ಪತ್ರವನ್ನು ತೋರಿಸಿ ಅದನ್ನು ತಿರಸ್ಕಾರಪೂರ್ವಕವಾಗಿ ಹರಿದು ಬಿಸಾಡಿಬಿಟ್ಟೆ. ಹೆಣ್ಣನ್ನು ಗೊತ್ತುಮಾಡುವುದೆಂದರೇನು? ಮದುವೆಯಾಗುವರು ಯಾರೋ, ಗೊತ್ತುಮಾಡುವರು ಯಾರೋ? ಇದೇನು ಪಶುವಿಕ್ರಯಕ್ಕೆ ಕೆಟ್ಟುಹೋಯ್ತು! ಪೂರ್ವ ಪ್ರೇಮವಿಲ್ಲದ ಮದುವೆ ಮದುವೆಯೇ? ಹೀಗೆಲ್ಲ ಹುಚ್ಚುಹುಚ್ಚಾಗಿ ಗೆಳೆಯರೊಡನೆ ಬಾಯಿಮಾಡಿದೆ. ಜೊತೆಗೆ ನನ್ನ ಲೋಕೋಪಕಾರದ ವಿವರಣೆಯನ್ನೆಲ್ಲ ಸವಿಸ್ತಾರವಾಗಿ ಬರೆದು, ನಾನು ಅವಿವಾಹಿತನಾದ ಆದರ್ಶವ್ಯಕ್ತಿಯಾಗಬೇಕೆಂಬ ಮಹಾಧ್ಯೇಯವನ್ನು ಒತ್ತಿ ಒತ್ತಿ ತಿಳಿಸಿ ನಮ್ಮ ತಂದೆಗೆ ಒಂದು ಕಾಗದ ಬರೆದೆ. ಅವರು ಮಕ್ಕಳು ಆಟಕ್ಕಾಗಿ ಬೀದಿಯಲ್ಲಿ ಕಟ್ಟುವ ಮಳಲಿನ ಮನೆಯನ್ನು ಮುಂಗಾರು ಮಳೆ ಎಷ್ಟರಮಟ್ಟಿಗೆ ಸದ್ದೆಮಾಡುವುದೋ ಅಷ್ಟರಮಟ್ಟಿಗೆ ನನ್ನ ಮಹಾಧ್ಯೇಯವನ್ನು ಸದ್ದೆಮಾಡಿ ನನಗೆ ಮತ್ತೊಂದು ಕಾಗದ ಬರೆದರು. ಅದರಲ್ಲಿ ನನ್ನ ಅಭಿಮಾನಭಂಗಕಾರಿಯಾದ ಒಂದು ವಿಷಯವಿತ್ತು. ನಾನು ಅವರು ಹೇಳಿದಂತೆ ಕೇಳದಿದ್ದರೆ ತಿಂಗಳ ಹಣವನ್ನೇ ಕಳುಹಿಸುವುದಿಲ್ಲ ಎಂದು ಬರೆದಿದ್ದರು. ನಾನು ಪ್ರಲಯಕ್ರುದ್ಧನಾದೆ. ನಿಮ್ಮ ಹಣವಿಲ್ಲದಿದ್ದರೆ ಅಷ್ಟೇ ಹೋಯಿತು; ನನಗೆ ತಿಂಗಳಿಗೆ ಸಾವಿರಾರು ರೂಪಾಯಿ ಸಂಪಾದನೆ ಮಾಡುವ ಶಕ್ತಿಯಿದೆ. ಇಂಗ್ಲೆಂಡಿಗೆ ಹೋಗುತ್ತೇನೆ, ಫ್ರಾನ್ಸಿಗೆ ಹೋಗುತ್ತೇನೆ, ಅಮೇರಿಕಾಕ್ಕೆ ಹೋಗುತ್ತೇನೆ. ಅಲ್ಲಿ ನನ್ನ ಉಪನ್ಯಾಸಗಳಿಂದಲೇ ಬೇಕಾದಷ್ಟು ಸಂಪಾದನೆಮಾಡಿ ದೇಶಕ್ಕೆ ಕೀರ್ತಿ ತರುತ್ತೇನೆ, ಎಂದು ಮೊದಲಾಗಿ ಕಾಗದ ಬರೆದೆ. ನನ್ನ ಪತ್ರಕ್ಕೆ ಪ್ರತ್ಯುತ್ತರವಾಗಿ

ಅವರು, ನಿನ್ನ ಹುಡುಗಾಟ ಸಾಕು; ಐಲುಮಾಡಬೇಡ ಎಂದು ಬರೆದು ದುಡ್ಡು ಕಳುಹಿಸಿದರು. ನನಗೆ ಮತ್ತೂ ಅವಮಾನವಾದಂತಾಗಿ ಮನಿ ಯೊರ್ಡರು ತೆಗೆದುಕೊಂಡು ಸುಮ್ಮನಾದೆ. ಆಗ ನಾನು ಓದು ತ್ತಿದ್ದುದು ಐದನೇ ಫಾರಂನಲ್ಲಿ!

ಬೇಸಗೆಯಲ್ಲಿ ಊರಿಗೆ ಹೋದೆ. ನಮ್ಮ ತಂದೆ ವಿವಾಹದ ಮಾತನ್ನೆತ್ತಿದರು. ನಾನು ವಿವಾಹವಾಗುವುದೇ ಇಲ್ಲ ಎಂದು ಪ್ರತಿಭಟಿ ಸಿದೆ. ನಮ್ಮ ತಾಯಿ ಬಹಳ ಅಂಗಲಾಚಿ ಬೇಡಿಕೊಂಡರು. "ಅಪ್ಪಾ ನನಗೆ ವಯಸ್ಸಾಯಿತು. ನಾನಿನ್ನು ಮನೆಗೆಲಸವೆಲ್ಲವನ್ನು ನೋಡಿ ಕೊಳ್ಳಲಾರೆ" ಎಂದರು. ನಾನು "ಮನೆಗೆಲಸಕ್ಕೆ ಸೊಸೆಯೇ ಆಗ ಬೇಕೇನೊ? ಕೂಲಿ ಕೊಟ್ಟರೆ ಯಾರು ಬೇಕಾದರೂ ನೋಡುತ್ತಾರೆ" ಎಂದು ನನ್ನ ಮಹಾಧ್ಯೇಯದ ವಿಚಾರವಾಗಿ ನನಗೆ ತಿಳಿದ ದೊಡ್ಡ ದೊಡ್ಡ ಪದಗಳನ್ನೇ ಆದಷ್ಟು ಮಟ್ಟಿಗೆ ಆಯ್ದು ಉಪಯೋಗಿಸಿ ಉಪನ್ಯಾಸ ಮಾಡಿದೆ. ನಮ್ಮ ತಾಯಿ ನನ್ನ ವಾಗ್ಝರಿಯನ್ನು ನೋಡಿ ನಾನೆಳಸಿದಂತೆ ವಿಸ್ಮಯಪಡುವುದಕ್ಕೆ ಬದಲಾಗಿ ವಿಷಾದಪಟ್ಟುಕೊಂಡು ಸುಮ್ಮನಾದರು.

ನಮ್ಮ ತಂದೆ ನನ್ನೊಡನೆ ವಾದಿಸಲೇ ಇಲ್ಲ. ಸುಮ್ಮನಿದ್ದು ಒಂದು ದಿನ ನನ್ನನ್ನು ನಮ್ಮ ಮಾವನ ಮನೆಗೆ ಕರೆದುಕೊಂಡುಹೋದರು. ಅಲ್ಲಿ ರೋಹಿಣಿಯನ್ನು ಕಂಡೆ. ನನ್ನ ನೂರು ಕೋಟಿ ವಾದಗಳಿಗೆ ಮನ್ಮಥನೊಡ್ಡಿದ ಮೌನವೂ ಕೋಮಲವೂ ಸುಂದರವೂ ಸುಮನೋ ಹರವೂ ಆದ ಏಕಮಾತ್ರ ಪ್ರತಿವಾದದಂತೆ ಇದ್ದಳವಳು.

ಅವಳನ್ನು ನೋಡಿದಂದು ಆಜೀವ ಬ್ರಹ್ಮಚರ್ಯವು ಪ್ರಕೃತಿಗೆ ಸಮ್ಮತವಲ್ಲ ಎಂಬ ಭಾವ ಮೆಲ್ಲಗೆ ಮನದಲ್ಲಿ ವರ್ಷಾಗಮನದ ಪ್ರಥಮ ಸಂಧ್ಯಾಗಗನದಲ್ಲಿ ಆವಿರ್ಭವಿಸುವ ಇಂದ್ರಧನುಸ್ಸಿನಂತೆ ಮೂಡಿತು. ಹಾಗೆಯೇ ಸಂಪೂರ್ಣಬ್ರಹ್ಮಚರ್ಯವೂ ಅಸ್ವಾಭಾವಿಕವೆಂದು ನಿರ್ಧರಿಸಿದೆ. ಪದ್ಮಪತ್ರವು ಜಲದಲ್ಲಿರುವಂತೆ ಸಂಸಾರದಲ್ಲಿ ನಿರ್ಲಿಪ್ತನಾಗಿದ್ದುಕೊಂಡು ಲೋಕೋಪಕಾರ ಮಾಡಿ ಆಧುನಿಕ ಜನಕಮಹರ್ಷಿ ಎಂಬ ಕೀರ್ತಿಗೆ ಭಾಜನನಾಗುವೆನೆಂದು ತಿಳಿದೆ.

ನಾನು ರೋಹಿಣಿಯನ್ನು ಮದುವೆಯಾದಂದು ಜೋಯಿಸರು ನನಗಿಟ್ಟ ಹೆಸರು ಸಾರ್ಥಕವಾಯಿತು ಎಂದುಕೊಂಡೆ. ಚಂದ್ರ ರೋಹಿಣಿಯರಂತೆ ಆದರ್ಶ ಪತಿಪತ್ನಿಯರಾಗಿ ಅನಂತ ಕಾಲವೂ ಅನವರತ ಅಖಂಡ ಪ್ರೇಮೈಕ್ಯರಾಗಿರುತ್ತೇವೆ ಎಂದು ಧರ್ಮಶಪಥ ಮಾಡಿದೆ. ನನ್ನ ಮತ್ತು ರೋಹಿಣಿಯ ಹೆಸರು ಸೀತಾ ರಾಮರು, ಸಾವಿತ್ರಿ ಸತ್ಯವಂತರು, ನಳ ದಮಯಂತಿಯರು ಮೊದಲಾದವರ ನಾಮಮಾಲೆಯಲ್ಲಿ ಅಗ್ರಸ್ಥಾನವನ್ನು ಪಡೆಯದಿರದು ಎಂದು ನಿಶ್ಚಯಮಾಡಿಕೊಂಡೆ. ಸಂನ್ಯಾಸಾದರ್ಶವೂ ಬ್ರಹ್ಮಚರ್ಯಾದರ್ಶವೂ ಸಂಸಾರಾದರ್ಶದ ಮುಂದೆ ನೀರಸ ತುಚ್ಛವಾಗಿ ಕಂಡುಬಂದುವು.

*   *   *   *

ನಮ್ಮೂರಿನಿಂದ ಬೆಂಗಳೂರಿಗೆ ಹೊರಟುಬಂದೆ. ನನ್ನ ಮಿತ್ರರು ನನ್ನನ್ನು ಅಭಿನಂದಿಸಿದರು; ಶ್ಲಾಘಿಸಿದರು; ನಿನಗೆ ಸುಬುದ್ಧಿ ಬಂತು ಎಂದರು. ನಾನು ಅವರೊಡನೆ, ಈಶ್ವರನೇ ಸಂಸಾರವನ್ನು ಕಟ್ಟಿಕೊಂಡಿರುವಾಗ ಮಾನವನು ಅದನ್ನು ಹಳಿದರೆ ಮಹಾಪಾಪವೆಂದೂ, ಸ್ತ್ರೀಯು ಪುರುಷನಿಗೆ ಶಕ್ತಿರೂಪಿಣಿ ಎಂದೂ, ಆದ್ದರಿಂದಲೇ ಬ್ರಹ್ಮ ವಿಷ್ಣು ಮಹೇಶ್ವರರಿಗೆ ಸರಸ್ವತಿ ಲಕ್ಷ್ಮಿ ಪಾರ್ವತಿಯರು ಇರುವರೆಂದೂ, ಮನುಷ್ಯನು ಸಂಸಾರಿಯಾದರೆ ತಾವರೆಯೆಲೆ ನೀರಿನಲ್ಲಿರುವಂತೆ ಇರಬೇಕೆಂದೂ, ಕರ್ಮತ್ಯಾಗವು ಯಾವನಿಂದಲೂ ಅಸಾಧ್ಯವೆಂದೂ, ಸಂಪೂರ್ಣ ಕಾಮಜಯವು ಮಿಥ್ಯೆಯೆಂದೂ, ಸಂನ್ಯಾಸಿ ಬ್ರಹ್ಮಚಾರಿಗಳೆಲ್ಲ ಶುದ್ಧ ಕಪಟಿಗಳೆಂದೂ, ಅಸ್ವಾಭಾವಿಕಜೀವಿಗಳೆಂದೂ ವಿಧವಿಧವಾಗಿ ಭಾಷಣಮಾಡಿ ನನ್ನ ಆದರ್ಶಸ್ಥಾನವನ್ನು ಕಾಪಾಡಿಕೊಂಡೆ.

ಅಲ್ಲದೆ ರೋಹಿಣಿಗೆ ವಿಧವಿಧವಾದ ಪ್ರೇಮಪತ್ರಗಳನ್ನು ಬರೆಯತೊಡಗಿದೆ. ಅವುಗಳಲ್ಲಿ, ನಾವಿಬ್ಬರೂ ಶಾಶ್ವತಪ್ರೇಮ ನಿಗಳನಿಬದ್ಧರಾದ ಅನಂತಯಾತ್ರಿಕರೆಂದೂ; ದೇವ ದೇವತೆಗಳ ಸಮಕ್ಷದಲ್ಲಿ, ಸಾಕ್ಷ್ಯದಲ್ಲಿ ವಿವಾಹವಾದೆವೆಂದೂ; ಪತ್ನಿಯು ಸಹಧರ್ಮಿಣಿಯೆಂದೂ; ಪತಿಯೇ ಪತ್ನಿಗೆ ದೇವರೆಂದೂ; ಪತಿವ್ರತಾಧರ್ಮವು ಸ್ತ್ರೀಯರಿಗೆ ಸರ್ವಶ್ರೇಷ್ಠವಾದ ಆದರ್ಶವೆಂದೂ ನಾನಾ ರೀತಿಯಾಗಿ ಬರೆದು ಆಕೆಯ ಕರ್ತವ್ಯದ

ವಿಚಾರವಾಗಿ ಎಚ್ಚರಕೊಟ್ಟು, ನನ್ನ ಪ್ರಾಮುಖ್ಯತೆಯನ್ನು ಆಕೆ ಮರೆಯುದಂತೆ ಯತ್ನಿಸುತ್ತಿದ್ದೆ. ಪ್ರತಿಯೊಂದು ಕಾಗದದಲ್ಲಿಯೂ ರುಜು ಹಾಕುವಾಗ ಆಕೆಗೆ ನನ್ನ ಮಹತ್ವವು ಸ್ವಲ್ಪ ಮುಂದಟ್ಟಾಗಲೆಂದು ನನ್ನ ಹೆಸರಿನ ಮುಂದೆ ಇಂಗ್ಲೀಷಿನಲ್ಲಿ 'ಎಸ್. ಎಸ್. ಎಲ್. ಸಿ.' ಎಂದು ಬರೆಯುತ್ತಿದ್ದೆ.

ಬೇಸಗೆಯಲ್ಲಿ ಊರಿಗೆ ಹೋಗಿ ನೋಡುತ್ತೇನೆ, ರೋಹಿಣಿಗೆ ನಾನು ಬರೆದ ಪತ್ರವೊಂದೂ ಅರ್ಥವಾಗಿರಲಿಲ್ಲ! ನಾನು ಹೆಮ್ಮೆಯಿಂದ ಹಿಗ್ಗಿದೆ! ಆಕೆಗೆ ನನ್ನ ಪ್ರಖ್ಯಾತಿಯ ವಿಚಾರವಾಗಿ ತಿಳಿಯಹೇಳಿದೆ: ನಾನೇ ನನ್ನ ಸ್ಕೂಲಿನಲ್ಲಿ ಮೊದಲನೆಯವನು; ಉಪಾಧ್ಯಾಯರುಗಳಿಂದಲೂ ವಿವರಿಸಲಾಗದ ಗ್ರಂಥಭಾಗಗಳನ್ನು ಹುಡುಗರು ನನ್ನಿಂದ ಪಾಠ ಹೇಳಿಸಿಕೊಳ್ಳುತ್ತಾರೆ; ನಾನು ಎಂದರೆ ಎಲ್ಲರಿಗೂ ಗೌರವ; ಉಪಾಧ್ಯಾಯರುಗಳೂ ಕೂಡ ನನಗೆ ಹೆದರುತ್ತಾರೆ; ನಾನು ಪರೀಕ್ಷೆಗೆ ಕೂತುಕೊಳ್ಳದಿದ್ದರೂ ಪ್ಯಾಸಾಗುತ್ತಿತ್ತು; ಆದರೆ ಪದ್ಧತಿಗೋಸ್ಕರ ಕೂತಿದ್ದೆ; ನಾನು ಸರ್ವೋಚ್ಚ ಪ್ರಥಮವರ್ಗದಲ್ಲಿ ತೇರ್ಗಡೆಹೊಂದುವಂತೆ ಬರೆದಿದ್ದೇನೆ. . . . ರೋಹಿಣಿ ಬೆರಗಾಗಿಹೋಗಿ ತನ್ನ ಪತಿ ನಿಜವಾಗಿಯೂ ದೇವರೇ ಇರಬೇಕು ಎಂದು ತಿಳಿದಳು.

ಆದರೆ ನನಗೆ ಫೇಲಾಯಿತು. ನನ್ನ ವಿದ್ಯಾಭ್ಯಾಸ ನಿಂತಿತು. ಮನೆಯಲ್ಲಿ ರೋಹಿಣಿಯೊಡನೆ ಆದರ್ಶ ಸಂಸಾರಿಯಾಗಿ ನಿಂತೆ. ಬುದ್ಧಿ ಸ್ವಲ್ಪ ಸ್ತಿಮಿತಕ್ಕೆ ಬಂತು. ನಗರದ ನನ್ನ ಮಿತ್ರರು, ನನ್ನಂಥವರು ವಿದ್ಯಾಭ್ಯಾಸ ನಿಲ್ಲಿಸಬಾರದೆಂದೂ, ಮುಂದೆ ನನ್ನಿಂದ ದೇಶಕ್ಕೆ ಮಹೋಪಕಾರವಾಗಬೇಕಾಗಿದೆಯೆಂದೂ, ಒಂದುಸಾರಿ ತೇರ್ಗಡೆ ಹೊಂದದಿದ್ದುದಕ್ಕಾಗಿ ಅಧೈರ್ಯಪಡಬಾರದೆಂದೂ, ನನಗಿದ್ದ ಮಹದಾಕಾಂಕ್ಷೆ ಮಹಾಧ್ಯೇಯಗಳನ್ನು ಸೂಚಿಸಿ ಕಾಗದ ಬರೆದರು. ನಾನು ಅದಕ್ಕೆ ಪ್ರತ್ಯುತ್ತರವಾಗಿ ನನಗಿದ್ದ ಶಬ್ದಭಂಡಾರವನ್ನೆಲ್ಲಾ ಸೂರೆಮಾಡಿ "ನಾನು ಫೈಲಾದುದಕ್ಕಾಗಿ ವಿದ್ಯಾಭ್ಯಾಸವನ್ನು ನಿಲ್ಲಿಸಲಿಲ್ಲ. ಅಧೈರ್ಯವೆಂಬುದು ನಾನಿದ್ದೆಡೆ ಕಾಲಿಡಲರಿಯದು. ಆದರೆ ದೇಶೋದ್ಧಾರದ ದೃಷ್ಟಿಯಿಂದ ಗ್ರಾಮನಿವಾಸಿಯಾಗಿದ್ದೇನೆ. ವಿದ್ಯೆ

ಎಂಬುದು ಪರೀಕ್ಷೆಗಳನ್ನು ಪ್ಯಾಸುಮಾಡಿದ ಮಾತ್ರದಿಂದ ಲಭಿಸುವುದಿಲ್ಲ. ನಾನು ಮನೆಯಲ್ಲಿಯೇ ಗ್ರಂಥಭಂಡಾರವೊಂದನ್ನು ಇಡಲು ಹವಣಿಸಿದ್ದೇನೆ. ಸ್ವಸಾಮರ್ಥ್ಯದಿಂದಲೇ ಆದರ್ಶ ಜ್ಞಾನಿಯಾಗುತ್ತೇನೆ. ಸಾಕ್ರೆಟೀಸನು ಎಂ.ಎ. ಪ್ಯಾಸುಮಾಡಿದ್ದನೇ? ವೇದವ್ಯಾಸರು ವಿಶ್ವವಿದ್ಯಾನಿಲಯದಲ್ಲಿ ಓದಿದ್ದರೇ? ವಾಲ್ಮೀಕಿಗೆ ಸ್ಕಾಲರ್‌ಷಿಪ್ ಬರುತ್ತಿತ್ತೇ? ಎಲ್ಲರೂ ಪಟ್ಟಣಗಳಲ್ಲಿ ನೇರಿಬಿಟ್ಟರೆ ಹಳ್ಳಿಯನ್ನು ಉದ್ಧಾರ ಮಾಡುವರಾರು? ನಮ್ಮ ದೇಶ ಹಳ್ಳಿಗಳ ದೇಶ. ಎಲ್ಲರೂ ಗ್ರಾಮಗಳಿಗೆ ಮರಳಿದರೇ ದೇಶೋದ್ಧಾರವಾಗುವುದು. ನಾನೀಗ ಗ್ರಾಮೋದ್ಧಾರ ಕಾರ್ಯದಲ್ಲಿ ತೊಡಗಿ ಇತರರಿಗೆ ಆದರ್ಶವಾಗುತ್ತಿದ್ದೇನೆ. ದೇಶಭಕ್ತರೆಲ್ಲರೂ ಗ್ರಾಮನಿವಾಸಿಗಳಾಗಬೇಕು. ನಾನಿಲ್ಲಿ ಹಳ್ಳಿಯವರಿಗೆ ಆರೋಗ್ಯ ವ್ಯವಸಾಯ ಮೊದಲಾದುವುಗಳ ವಿಚಾರದಲ್ಲಿ ಉಪನ್ಯಾಸಮಾಡುತ್ತಿದ್ದೇನೆ. "ಗ್ರಾಮ ಪುನರುಜ್ಜೀವ ಸಂಜೀವಿನೀ" ಎಂಬ ಒಂದು ದೊಡ್ಡ ಗ್ರಂಥವನ್ನು ಬರೆಯಲು ಸಾಮಗ್ರಿಗಳನ್ನು ಒಟ್ಟುಗೂಡಿಸುತ್ತಿದ್ದೇನೆ. ಅಲ್ಲದೆ ಅಧ್ಯಯನಕ್ಕೂ ಹಳ್ಳಿಯೇ ವಾಸಿ. ನಗರದಲ್ಲಿ ನೂರಾರು ಪ್ರಲೋಭನಗಳಿವೆ. ಗಡಿಬಿಡಿ, ಅಶಾಂತಿ. ಈ ಎಲ್ಲ ಕಾರಣಗಳಿಂದ ನನ್ನ ಉಚ್ಚಾದರ್ಶ ಸಾಧನೆಯು ಗ್ರಾಮದಲ್ಲಿಯೇ ಸುಲಭಸಾಧ್ಯವಾಗುವುದು. ನೀವೂ ನನ್ನಂತೆಯೇ ಮಾಡಿದರೆ ಲೋಕಕ್ಕೆ ಆದರ್ಶವಾಗುತ್ತೀರಿ" ಎಂದು ಬರೆದೆ. ನನ್ನ ಸ್ನೇಹಿತರು ದಿಗ್ಭ್ರಾಂತರಾದರು. ನನ್ನ ತ್ಯಾಗವನ್ನು ಮುಕ್ತಕಂಠದಿಂದ ಹೊಗಳಿ, ನನ್ನನ್ನು ಆದರ್ಶಜೀವಿ ಎಂದು ಸ್ತೋತ್ರ ಮಾಡಿ ಅನೇಕರು ಅನೇಕ ಕಾಗದಗಳನ್ನು ಬರೆದರು. ಕೆಲವರು ನನ್ನನ್ನು ಬುದ್ಧನಿಗೆ ಹೋಲಿಸಿ ಬರೆದಿದ್ದರು. ನಾನು ಪ್ರತಿಭಟಿಸಿ ಕಾಗದ ಬರೆದೆ, ಬುದ್ಧನು ಪ್ರಪಂಚದ ರಣರಂಗದಲ್ಲಿ ನುಗ್ಗಿ ಸೋತು ಓಡಿಹೋಗಿ ಸಂನ್ಯಾಸಿಯಾದುದರಿಂದ ಆತನು ಆದರ್ಶ ಪುರುಷನಲ್ಲ ಎಂದು. ಈ ಹೊಗಳಿಕೆಗಳ ನಡುವೆ ಒಬ್ಬನು ಮಾತ್ರ, ಇದೆಲ್ಲ ಬರಿಯ ಬೂಟಾಟಿಕೆ ಎಂದು ಬರೆದಿದ್ದ. ನನ್ನಮೇಲಿನ ಹೊಟ್ಟೆಕಿಚ್ಚಿನಿಂದಲೇ ಬರೆದಿರಬೇಕೆಂದು ಆ ಕಾಗದವನ್ನು ಮಾತ್ರ ರೋಹಿಣಿಗೆ ಓದದೆ ಹರಿದುಹಾಕಿದೆ.

* * * *

ಮುಗುದೆಯಾದ ನನ್ನ ಮುದ್ದು ರೋಹಿಣಿ ಒಂದು ಗಂಡು ಮಗುವನ್ನು ಹೆತ್ತು ಅಸ್ವಸ್ಥಳಾದಳು. ಕೆಲವು ದಿನಗಳಲ್ಲಿ ರೋಗವು ಭೀಷಣವಾಯಿತು. ಎಷ್ಟೆಷ್ಟು ಪ್ರಯತ್ನಪಟ್ಟರೂ ಪ್ರಯೋಜನವಾಗಲಿಲ್ಲ. ರೋಗ ವಿಷಮಾವಸ್ಥೆಗೆ ತಿರುಗಿತು. ನನ್ನ ಸುವರ್ಣಸ್ವಪ್ನಮುದ್ರಿತ ವಾದ ಸ್ವರ್ಗವು ಸಿಡಿದೊಡೆಯುವ ಕಾಲ ಬಂದಿತು. ನನ್ನ ಜೀವನ ಜ್ಯೋತಿ ಆ ನನ್ನ ಸಿ ರ್ವಾ ಣ ವಾ ಯಿ ತು. ನನ್ನಲ್ಲಿದ್ದ ಲಘುಪ್ರಕೃತಿ ಇದ್ದಕ್ಕಿದ್ದಂತೆ ಮಾಯವಾಗಿಹೋಯಿತು. ರೋಹಿಣಿಯ ಬಳಿ ಹಗಲೂ ಇರುಳೂ ಕುಳಿತು ಭಗವಂತನನ್ನು ಬೇಡಿದೆ. ನಾನು ಹಿಂದೆ ಮತ್ತಾವ ಕಾರ್ಯವನ್ನೂ ಅಷ್ಟು ಮನಃಪೂರ್ವಕವಾಗಿ ಮಾಡಿರಲಿಲ್ಲ. "ಹೇ ಜಗದೀಶ್ವರ, ನನ್ನಲ್ಲಿರುವ ಕುಂದುಕೊರತೆಗಳೇನಿದ್ದರೂ ಕ್ಷಮಿಸು. ನನ್ನ ರೋಹಿಣಿಯನ್ನು ಉಳಿಸಿಕೊಡು. ಉಳಿದ ನನ್ನ ನಡತೆ ಗಳೆಲ್ಲವೂ ಕಪಟ ನಟನೆಯಾಗಿದ್ದಿರಬಹುದು; ಆದರೆ ನನ್ನ ರೋಹಿಣಿಯ ಮೇಲೆ ನನಗಿರುವ ಪ್ರೇಮವು ಅಕುಟಿಲವಾದುದೆಂದು ನಿನ್ನ ಮೇಲೆ ಆಣೆಯಿಟ್ಟು ಹೇಳಬಲ್ಲೆ. ನಾನು ಪಾಪಿ, ಮಹಾಪರಾಧಿ. ಆದರೆ ನೀನು ಪತಿತಪಾವನ, ಕರುಣಾಸಾಗರ. ದುರ್ದಮ್ಯವಾದ ನಿನ್ನ ಭಯಂಕರ ಶಕ್ತಿಚಕ್ರವು ನನ್ನಂತಹ ಕ್ರಿಮಿಯಮೇಲೆ ಹಾದುಹೋಗದಿರಲಿ. ನಿನಗೆ ಅನಂತಾನಂತ ವಂದನೆಗಳು; ಸಹಸ್ರ ಸಹಸ್ರ ನಮಸ್ಕಾರಗಳು!" ಆದರೆ ವಿಧಿ ನಿಷ್ಕರುಣ ಕ್ರೌರ್ಯದಿಂದ ನನ್ನ ಪ್ರಾರ್ಥನೆಯನ್ನು ನನ್ನ ಮುಖಕ್ಕೇ ಎಸೆದು ತನ್ನ ಕಾರ್ಯವನ್ನು ಮಾಡಿಯೇ ಮಾಡಿತು. ನನ್ನ ರೋಹಿಣಿ ಮೃತ್ಯುಲೋಕದ ಅನಂತ ಘನಾಂಧಕಾರದಲ್ಲಿ ವಿಲೀನ ವಾಗಿ ಕಣ್ಮರೆಯಾಗಿಹೋದಳು. ನಾನು ಜೀವನದ ಕಗ್ಗತ್ತಲೆಯಲ್ಲಿ ಬಟ್ಟೆಗೆಟ್ಟೆ.

ರೋಹಿಣಿಯ ಮರಣವು ನನ್ನನ್ನು ಹಣ್ಣುಮಾಡಿತು. ನನ್ನಲ್ಲಿ ಮೊದಲಿದ್ದ ಗರ್ವವು ಮಾಯವಾಯಿತು. ಅತಿ ದೀನನಾದೆ. ನನ್ನ ಸ್ವಭಾವವೂ ಸ್ವಲ್ಪ ಗಂಭೀರವಾಯಿತು. ಒಬ್ಬನೇ ಕುಳಿತುಕೊಂಡು– ನನ್ನ ರೋಹಿಣಿ ಯಾರು? ನಾನು ಯಾರು? ನಾವೆಲ್ಲಿಂದ ಬಂದೆವು? ಎಲ್ಲಿಗೆ ಹೋಗುತ್ತೇವೆ? ಏತಕ್ಕಾಗಿ ಬಂದೆವು? ಜೀವನಲೀಲೆಯ

ಅರ್ಥವೇನು? ಎಂಬ ನೂರಾರು ಸಮಸ್ಯೆಗಳಿಗೆ ಉತ್ತರಗಳನ್ನು ಕಂಡುಹಿಡಿಯಲು ಪ್ರಯತ್ನಿಸಿದೆ. ಅನೇಕ ಗ್ರಂಥಗಳನ್ನು ಓದಿದೆ. ಆದರೆ ಅಂಧಕಾರವು ಇನ್ನಿಷ್ಟು ಗಭೀರತರವಾದಂತಾಯಿತು. ರೋಹಿಣಿಯ ಜೊತೆಗೆ ಜೀವನದ ಸಮಸ್ತ ಕಾಂತಿಯೂ ಮಾಯವಾದಂತೆ ತೋರಿತು. ಸೂರ್ಯೋದಯ ಚಂದ್ರೋದಯಗಳು ನನ್ನನ್ನು ಅಣಕಿಸುವಂತೆ ತೋರಿತು. ನಕ್ಷತ್ರಗಳೂ ನನ್ನನ್ನೇ ಹಾಸ್ಯಮಾಡುವಂತೆ ತೋರಿತು. ತೊರೆಗಳ ಮೊರೆಯಲ್ಲಿ "ರೋಹಿಣೀ ರೋಹಿಣೀ" ಎಂಬ ನಾದವೇ ಕೇಳಿಸ ತೊಡಗಿತು. ಕೋಗಿಲೆ ಗಿಳಿ ಕಾಜಾಣ ಕಾಮಳ್ಳಿಗಳ ಇಂಚರದ ಅಂತ ರಾಳದಲ್ಲಿ ರೋಹಿಣಿಯ ನಾಮವಡಗಿರುವಂತೆ ಭಾಸವಾಯಿತು. ಅರಳುವ ಹೂಗಳೆಲ್ಲವೂ ನನ್ನ ರೋಹಿಣಿಯನ್ನು ತಮ್ಮ ಮಡಿಲಿನಲ್ಲಿ ಮರೆಮಾಡಿಟ್ಟು ಕೊಂಡಿರುವಂತೆ ತೋರಿತು. ನನ್ನೊಬ್ಬನ ಹೊರತು ವಿಶ್ವದಲ್ಲಿ ಉಳಿದೆಲ್ಲ ವಸ್ತುಗಳೂ ರೋಹಿಣಿಯನ್ನು ವಶಪಡಿಸಿಕೊಂಡಿರುವಂತೆ ಭಾಸ ವಾಯಿತು.

* * * *

ಹೃದಯ ಲೇಶಮಾತ್ರವೂ ಇಲ್ಲದ ನನ್ನ ಬಂಧುವೊಬ್ಬನು ನನ್ನ ರೋಹಿಣಿ ಇನ್ನೂ ಸಾಯುವುದರಲ್ಲಿದ್ದಾಗಲೇ ತನ್ನ ಮಗಳನ್ನು ನನಗೆ ಕೊಡುವುದಾಗಿ ನಮ್ಮ ತಂದೆಯವರೊಡನೆ ಪ್ರಸ್ತಾಪಿಸಿದ್ದು ನನಗೆ ಗೊತ್ತಾ ಯಿತು. ನಮ್ಮ ಮನೆಯವರೂ "ಹೋದವಳು ಹೋಗಿಯಾಯಿತು. ಹಣೆಯಲ್ಲಿ ಬರೆದುದನ್ನು ಅಳಿಸುವುದಕ್ಕಾಗುತ್ತದೆಯೇ? ಇನ್ನೆಷ್ಟು ದಿನ ಹಾಗೆಯೇ ಇರುತ್ತೀಯೆ? ನೀನಿನ್ನೂ ತರುಣ. ಇನ್ನೊಂದು ಮದುವೆ ಮಾಡಿಕೋ, ಒಳ್ಳೆಯದೊಂದು ಹೆಣ್ಣೂ ಗೊತ್ತಾಗಿದೆ. ಒಳ್ಳೆಯ ಮನೆ ತನ; ಐಶ್ವರ್ಯವಂತರು. ಅಲ್ಲದೆ ನಿನ್ನ ಚಿಕ್ಕ ಕೂಸನ್ನು ನೋಡಿಕೊಳ್ಳು ವುದಕ್ಕೂ ಸಹಾಯವಾಗುವುದು." ಎಂದು ಉಪದೇಶಿಸಿದರು. ನನಗೆ ಹಸಿಯ ಗಾಯದ ಮೇಲೆ ಹುಳಿ ಹಿಂಡಿದಂತಾಯ್ತು. ಆದರ್ಶ ಸಂನ್ಯಾಸಿ ಯಾಗಲಾರದೆ ಹೋದೆ; ಆದರ್ಶ ಬ್ರಹ್ಮಚಾರಿಯಾಗದೆ ಹೋದೆ; ಆದರ್ಶ ಪತಿಯೂ ಆಗಲಾರೆನೆ? ಎಂದುಕೊಂಡು, ಮುಂದೆ ಎಂದೆಂದೂ

ವಿವಾಹವಾಗುವುದಿಲ್ಲ, ಉಳಿದೆಲ್ಲ ಸ್ತ್ರೀಯರೂ ತಾಯಂದಿರಿಗೂ ಸೋದರಿಯರಿಗೂ ಸದೃಶ ಎಂದು ಮದುವೆಯ ಮಾತನ್ನು ಕತ್ತರಿಸಿಬಿಟ್ಟೆ.

ಎರಡನೆ ಮದುವೆ ಮಾಡಿಕೊಳ್ಳುವುದು ಮಹಾಪಾಪ ಎಂದು ತೋರಿತು. ವಿವಾಹ ಸಮಯದಲ್ಲಿ ಸರ್ವ ದೇವತೆಗಳನ್ನೂ, ಸರ್ವ ಋಷಿಗಳನ್ನೂ, ಸರ್ವ ವೇದಶಾಸ್ತ್ರಗಳನ್ನೂ, ಸರ್ವ ಮಹಾಪುರುಷರನ್ನೂ, ಸರ್ವ ತೀರ್ಥಗಳನ್ನೂ ಸಾಕ್ಷಿಗೆ ಕರೆದು "ನಾನು ನನ್ನ ಪತ್ನಿಯನ್ನು ಅನಂತ ಕಾಲದ ವರೆಗೆ ಕೈಬಿಡದೆ ಪ್ರೀತಿಸುತ್ತೇನೆ" ಎಂದು ಹೇಳುವುದೇನು? ಹೆಂಡತಿ ಸತ್ತ ಕೆಲದಿನಗಳಲ್ಲಿಯೇ ಅದೆಲ್ಲವನ್ನೂ ಮರೆತು ಮತ್ತೊಬ್ಬಳನ್ನು ಮದುವೆಯಾಗುವುದೆಂದರೇನು? ನನ್ನ ಮನಸ್ಸಿಗೆ ಎರಡನೆಯ ಸಾರಿ ವಿವಾಹವಾಗುವುದು ವ್ಯಭಿಚಾರಕ್ಕಿಂತಲೂ ಭಯಂಕರವಾಗಿ ತೋರಿತು. ದ್ವಿತೀಯ ವಿವಾಹ ಎಷ್ಟು ಶಾಸ್ತ್ರಸಮ್ಮತವಾದರೂ ಪ್ರಥಮಪತ್ನೀದ್ರೋಹ ಎಂದು ಕಂಡುಬಂದಿತು. ಸ್ತ್ರೀಯು ಗಂಡ ಸತ್ತರೆ ತಾನು ದೇವತೆಗಳಿಗಿತ್ತ ಭಾಷೆಯನ್ನು ಪಾಲಿಸುತ್ತಾಳೆ. ಆದರೆ ಪುರುಷನು ಆಕೆಗೆ ದ್ರೋಹವೆಸಗುತ್ತಾನೆ. ಪ್ರೇಮ ನಿಶ್ಚಲವೂ ಶಾಶ್ವತವೂ ಆಗಿರಬೇಕು. ಸತಿ ಮಡಿದೊಡನೆ ಮತ್ತೊಬ್ಬಳನ್ನು ಬಯಸುವ ಪ್ರೇಮ ನಿಃಸಂದೇಹವಾಗಿ ವೇಷಾಂತರ ಹೊಂದಿದ ಕಾಮ. ನಾನು ಆದರ್ಶ ಪತಿಯಾಗಿರುತ್ತೇನೆ. ಸ್ವರ್ಗದಲ್ಲಿ ಪುನಃ ನನ್ನ ರೋಹಿಣಿಯನ್ನು ಶುದ್ಧನಾಗಿಯೇ ಆಲಿಂಗಿಸುತ್ತೇನೆ. ನನ್ನ ಜೀವನವನ್ನೆಲ್ಲ ಲೋಕೋಪಕಾರಕ್ಕಾಗಿ ತೇದುಬಿಡುತ್ತೇನೆ. ನಾನು ಕಾಮಿಯಲ್ಲ, ನಿಷ್ಕಾಮಪ್ರೇಮಿ ಎಂಬುದನ್ನು ಜಗತ್ತಿಗೇ ತೋರಿಸುತ್ತೇನೆ. ಹೀಗೆಂದು ನಿರ್ಧರಿಸಿ ನನಗಿದ್ದ ವಿರಾಮದಲ್ಲಿ ಬಹು ಭಾಗವನ್ನು ಪವಿತ್ರ ಗ್ರಂಥ ಪಠನೆಗೂ ಈಶ್ವರ ಧ್ಯಾನಕ್ಕೂ ಉಪಯೋಗಿಸುತ್ತ ಆದರ್ಶ ಸಾಧನೆಗೆ ಪ್ರಾರಂಭಮಾಡಿದೆ.

ಎಷ್ಟೋ ಜನರು ನಾನಾ ವಿಧವಾಗಿ ಪುನಃ ವಿವಾಹವಾಗುವಂತೆ ಉಪದೇಶಮಾಡಿದರು; ಉಪನ್ಯಾಸಮಾಡಿದರು. ಎಂತಹ ಯೋಗಿಗೂ ಬ್ರಹ್ಮಚರ್ಯ ದುಸ್ಸಾಧ್ಯ ಎಂದು ಬೋಧಿಸಿದರು. ನಾನು ಅದು ಸಾಧ್ಯವೆಂಬುದನ್ನು ತೋರಿಸಬಲ್ಲೆ ಎಂದು ಉತ್ತರವಿತ್ತೆ. ಪುನಃ

ಮದುವೆಯಾದ ದೊಡ್ಡ ಮನುಷ್ಯರನ್ನು ನನ್ನ ಮುಂದೆ ಉದಾಹರಣೆಯಾಗಿ ಒಡ್ಡಿದರು. ನಾನು ಅವರನ್ನೆಲ್ಲ ಕ್ಷುದ್ರಜೀವಿಗಳು ಎಂದು ಹಳಿದುಬಿಟ್ಟೆ. ನನ್ನ ಕಣ್ಣಿಗೆ ಇತರ ಮಾನವರೆಲ್ಲರೂ ರಸಾತಲದಲ್ಲಿ ಹರಿದಾಡುವಂತೆ ತೋರಿದರು. ಸ್ವರ್ಗಪ್ರಾಂತದ ಸುನೀಲ ನಿರ್ಮಲ ಮೇಘಮಂಡಲದಲ್ಲಿ ನಾನೊಬ್ಬನೇ ಹಾರುತ್ತಿರುವೆನೆಂದು ತಿಳಿದು ಕೃತಜ್ಞತೆಯಿಂದ ಕಣ್ಣೀರು ತುಂಬಿ ಭಗವಂತನನ್ನು ವಂದಿಸಿದೆ. ಪುನಃ ಜೋಯಿಸರು ನನಗಿಟ್ಟ ಹೆಸರು ಸಾರ್ಥಕವಾಯಿತೆಂದು ಹಿಗ್ಗಿದೆ.

*      *      *      *

ಹೊಳೆದಳಿದ ಮಿಂಚು ಹಣತೆಯ ಸೊಡರನ್ನು ಹೊತ್ತಿಸಿದುದೋ ಎಂಬಂತೆ ರೋಹಿಣಿಯು ಒಂದು ಗಂಡು ಶಿಶುವನ್ನು ನನಗೆ ದಯಪಾಲಿಸಿದ್ದಳು. ಆ ಕೂಸಿಗೆ ನಾನು ರೋಹಿಣೀಕುಮಾರ ಎಂದೇ ಹೆಸರಿಟ್ಟೆನು. ಆ ಶಿಶುವು ಸೀತೆಯ ಲಾಲನೆ ಪಾಲನೆಯಿಂದಲೇ ಬೆಳೆಯುತಿತ್ತು.

ಸೀತೆ ರೋಹಿಣಿಯ ತಂಗಿ. ನಮ್ಮ ಅತ್ತೆಯವರು ಮೊಮ್ಮಗನನ್ನು ನೋಡಿಕೊಳ್ಳಲು ಆಕೆಯನ್ನು ನಮ್ಮ ಮನೆಯಲ್ಲಿಯೇ ಬಿಟ್ಟಿದ್ದರು. ಆಕೆಯೂ ಅಕ್ಕನ ಶಿಶುವನ್ನು ತನ್ನ ಪುಟ್ಟ ಹೃದಯದಲ್ಲಿ ತುಂಬಿ ತುಳುಕುತ್ತಿದ್ದ ಸಮಸ್ತ ಪ್ರೇಮದಿಂದಲೂ ಸಲಹುತ್ತಿದ್ದಳು. ಸೀತೆಯನ್ನು ಕಂಡಾಗಲೆಲ್ಲ ಕೃತಜ್ಞತೆಯಿಂದ ನನಗೆ ಕಣ್ಣೀರು ಬರುತ್ತಿತ್ತು. ಆಕೆ ನನ್ನೆದುರು ಬಂದು ಸ್ವಲ್ಪ ನಾಚಿಕೆಯಿಂದ "ಭಾವ, ಮುದ್ದಗೊಂದು ಗೊಂಬೆ ಬೇಕು. ಭಾವ, ಮುದ್ದಗೊಂದು ಕುಲಾವಿ ಬೇಕು." ಎಂದು ಶಿಶುವಿಗೆ ಬೇಕಾಗಿದ್ದ ಪದಾರ್ಥಗಳ ಪಟ್ಟಿಯನ್ನು ಹೇಳುತ್ತ ನಿಂತಿರಲು ನನ್ನ ಕಣ್ಣಿಗೆ ರೋಹಿಣಿಯೇ ನಿಂತಂತೆ ತೋರುತ್ತಿತ್ತು. ಸೀತೆಗೂ ರೋಹಿಣಿಗೂ ಅಷ್ಟೊಂದು ರೂಪಸಾದೃಶ್ಯವಿತ್ತು.

ರೋಹಿಣಿಯ ಹಠಾತ್ತಾದ ಮರಣದಿಂದ ನನ್ನಲ್ಲಿ ಉದ್ರೇಕವಾಗಿದ್ದ ಆದರ್ಶ ಪ್ರಿಯತೆ ಬರಬರುತ್ತ ಮಾಸತೊಡಗಿತು. ದಿನ ಕಳೆದಹಾಗೆಲ್ಲ ಸೀತೆ ಮೆಲ್ಲಗೆ ರೋಹಿಣಿಯಾಗುತ್ತಿದ್ದಳು. ಆಕೆಯನ್ನು ಕಂಡಾಗ ನನ್ನ ಹೃದಯ ತಲ್ಲಣಿಸಿದರೆ ಅದು ಕೃತಜ್ಞತೆಯಿಂದ ಹಾಗಾಗುವುದೆಂದು

ತಿಳಿಯುತ್ತಿದ್ದೆ. ಕಡೆಕಡೆಗೆ ನನ್ನ ಅಂತರ್ಭಾವ ಪ್ರಸ್ಫುಟವಾಗ ತೊಡಗಿತು. ನನ್ನಲ್ಲಿ ಹೋರಾಟ ಪ್ರಾರಂಭವಾಯಿತು. ಪರಲೋಕ ಇರುವುದೋ ಇಲ್ಲವೋ? ಯಾರಿಗೆ ಗೊತ್ತು? ಸತ್ತ ಮೇಲೆ ಆತ್ಮ ಶೂನ್ಯವಾಗಬಾರದೇಕೆ? ಹಾಗಾದರೆ ನನ್ನ ಕಠಿನವ್ರತ ನಿಷ್ಪ್ರಯೋಜನವಾದುದಲ್ಲವೆ? ನನ್ನ ಆದರ್ಶ ಬರಿಯ ಭ್ರಮೆಯೋ ಏನೊ? ಇದೇ ಉಚ್ಚಾದರ್ಶವಾದ ಪಕ್ಷದಲ್ಲಿ ಲೋಕದಲ್ಲಿ ಕೋಟ್ಯನು ಕೋಟಿ ಜನಗಳು ಬೇರೆಯ ಮಾರ್ಗದಲ್ಲೇಕೆ ಹೋಗುವರು? ಬಹುಶಃ ಅವರ ಸ್ವಭಾವಜನ್ಯ ಜ್ಞಾನವು ನನ್ನ ವಿಚಾರಜನ್ಯ ಜ್ಞಾನಕ್ಕಿಂತಲೂ ಹೆಚ್ಚು ವಿವೇಕವಾಗಿರಬಾರದೇಕೆ? ನನ್ನದು ಸರಿಯಾದ ಮಾರ್ಗವಾದ ಪಕ್ಷದಲ್ಲಿ ಈ ಮನಸ್ಸಿನ ತುಮುಲಯುದ್ಧವೇಕೆ? ನೀರಿನಲ್ಲಿರಬೇಕಾದ ಮೀನು ಭೂಮಿಯ ಪ್ರಾಣಿಗಳನ್ನು ನೋಡಿ ನೆಲದಮೇಲೆ ಓಡಾಡುವುದೇ ನೀರಿನಲ್ಲಿ ಈಜುವುದಕ್ಕಿಂತ ಉತ್ತಮಾದರ್ಶವೆಂದು ತಿಳಿದು ಮೇಲೆ ನೆಗೆದರೆ ಆತ್ಮಹತ್ಯಮಾಡಿಕೊಂಡಂತೆ ಆಗುವುದಿಲ್ಲವೆ? ಅಸ್ವಾಭಾವಿಕವಾದುದೆಲ್ಲವೂ ಅಧರ್ಮವಲ್ಲವೆ? ನನ್ನ ಈಗಿನ ಸ್ಥಿತಿ ಅಸ್ವಾಭಾವಿಕವಾದುದಾಗಿರಬಾರದೇಕೆ? ಹೊಟ್ಟೆ ಹಸಿದುಕೊಂಡು ಭಗವಂತನನ್ನು ಧ್ಯಾನಿಸಿದರೆ ಅನ್ನವೇ ಭಗವಂತನಾಗಿಬಿಡುವ ಸಂಭವವಿಲ್ಲವೆ? ಹಾಗೆಯೇ ಉಗ್ರವಾದ ಇಂದ್ರಿಯದಮನದಿಂದ ಕಾಮನೇ ರಾಮನಾಗುವುದೂ ಸಾಧ್ಯವಲ್ಲವೆ? ಹೀಗೆಂದು ವಿಚಾರಮಾಡುತ್ತ ಮಾಡುತ್ತ ದ್ವಿತೀಯ ವಿವಾಹವು ಸ್ವಾಭಾವಿಕವೆಂದು ತೋರತೊಡಗಿತು. ಅಲ್ಲದೆ ಸೀತೆ ದಿನ ದಿನವೂ ಸುಂದರಿಯಾಗಲಾರಂಭಿಸಿದಳು. ರೋಹಿಣಿಯಂತೆಯೇ ತೋರಿದಳು. ಅವಳು ನನ್ನನ್ನೇ ಮೋಹಿಸಿದಂತೆಯೂ ತೋರಿತು. ಅಂತಹ ಚೆಲುವೆಯಾದ ಮೃದುಸ್ವಭಾವದ ಹುಡುಗಿ ಯಾವನಾದರೂ ಒಬ್ಬ ಕಠಿನ ಅನಾಗರಿಕ ವ್ಯಕ್ತಿಗೆ ಲಭಿಸಿದರೆ ನಾನು ರೋಹಿಣಿಗೆ ಅನ್ಯಾಯ ಮಾಡಿದಂತಾಗುವುದಿಲ್ಲವೇ? ಸೀತೆಯ ಉಪಕಾರಕ್ಕೆ ಅಪಕಾರಮಾಡಿದಂತಾಗುವುದಿಲ್ಲವೇ? ರೋಹಿಣಿ ಜೀವದಿಂದಿದ್ದರೂ ಸೀತೆಯನ್ನು ಮದುವೆಮಾಡಿಕೊಳ್ಳಿ ಎಂದು ಅವಳೇ ಹೇಳುತ್ತಿರಲಿಲ್ಲವೇ? ಅಕ್ಕ ತಂಗಿಯರಿಗೆ ದೇಹ ಬೇರಾದರೂ ಆತ್ಮ ಒಂದಲ್ಲವೇ? ಎರಡನೆ ಮದುವೆ

ಮಾಡಿಕೊಂಡರೆ ತಾನೆ ಏನು? ಆದರ್ಶ ಜೀವಿಯಾಗಿರಲಾಗುವುದಿಲ್ಲವೆ? ಹೀಗೆ ನನ್ನಲ್ಲಿ ಹೋರಾಟವಾಗಿ ನಾನು ಮುಳುಗಿದೆನು. ಸೀತೆಗೆ ಸೋತೆನು. ಆದರೆ ಸೀತೆಗಾಗಿಯೇ ಸೋತೆನೆಂದೂ, ಅಂತಹ ಸೋಲು ಮಹಾತ್ಯಾಗ ವಾದುದರಿಂದ ಆದರ್ಶ ಜೀವನಕ್ಕೆ ಕಳೆ ಕಟ್ಟಿತೆಂದೂ ಸಂತೋಷಿಸಿದೆ.

* * * *

ನಮ್ಮ ಸಣ್ಣ ಹಳ್ಳಿ ಮಹಾ ವಾದ್ಯಘೋಷದಿಂದ ಅನುರಣಿತ ವಾಯಿತು. ದೂರದ ಊರುಗಳಿಂದ ಸುಭೂಷಿತವಾದ ಬಂಧುವೃಂದವು ಮನೆಗೆ ಬಿಜಯಮಾಡಿತು. ತಳಿರ ತೋರಣಗಳು ಬಾಗಿಲು ಬಾಗಿಲುಗಳಲ್ಲಿ ಮೆರೆದುವು. ಕದಿನಿಗಳು ಗುಢುಂ ಗುಢುಂ ಎಂದು ಶಬ್ದಮಾಡಿದುವು. ಸಸಂಭ್ರಮಿತರಾದ ಅತಿಥಿ ಅಭ್ಯಾಗತರ ಸಹಸ್ರಕಂಠ ತುಮುಲಧ್ವನಿ ವಿವಾಹೋತ್ಸವವನ್ನು ಮಹೋತ್ಸವವನ್ನಾಗಿ ಮಾಡಿತು. ನನ್ನ ದಿಬ್ಬಣ ಹೆಣ್ಣಿನ ಮನೆಗೆ ಉತ್ಸಾಹದಿಂದ ದಾಳಿಯಿಟ್ಟಿತು. ಮುಹೂರ್ತ ಸನ್ನಿಕಟವಾಯಿತು. ಧಾರೆಯೆರೆಯಲು ಜೋಯಿಸರು ನಿಂತರು. ನನ್ನ ಪಕ್ಕದಲ್ಲಿ ಸೀತೆಯೂ ನಿಂತಳು. ಸುಲಗ್ನ! ಸಾವಧಾನ! ಅಗ್ನಿ ಸಾಕ್ಷಿಯಾಗಿ! ವಾಯು ಸಾಕ್ಷಿಯಾಗಿ! ಅಷ್ಟದಿಕ್ಪಾಲಕರು ಸಾಕ್ಷಿ ಯಾಗಿ! ಸೂರ್ಯಚಂದ್ರರು ಸಾಕ್ಷಿಯಾಗಿ! ತಿರುಪತಿ ವೆಂಕಟರಮಣ ಸಾಕ್ಷಿಯಾಗಿ! ಮಹರ್ಷಿಗಳು ಸಾಕ್ಷಿಯಾಗಿ! ಶಚೀದೇವಿ ಇಂದ್ರರು ಸಾಕ್ಷಿಯಾಗಿ! ಸರಸ್ವತಿ ಬ್ರಹ್ಮರು ಸಾಕ್ಷಿಯಾಗಿ! ಪಾರ್ವತೀ ಪರ ಮೇಶ್ವರರು ಸಾಕ್ಷಿಯಾಗಿ! ಸರ್ವತೀರ್ಥಗಳು ಸಾಕ್ಷಿಯಾಗಿ! ಎಂದು ಮೊದಲಾಗಿ ಪ್ರಾರಂಭವಾಯಿತು. ನಾನು ಹಿಂದೆ ರೋಹಿಣಿಯನ್ನು ಮದುವೆಯಾದಾಗಲೂ ಇವರೆಲ್ಲರೂ ಸಾಕ್ಷಿಯಾಗಿದ್ದರು. ದೇವತೆಗಳನ್ನು ಹೀಗೆ ಪದೇಪದೇ ಸಾಕ್ಷಿಗೆ ಕರೆಯುವುದೂ ಮಾನವರ ಸ್ವಭಾವಗಳಲ್ಲಿ ಒಂದು; ಅಂತೆಯೇ ಅವರು ಸಾಕ್ಷಿಯಾಗುವುದೂ ಸ್ವಾಭಾವಿಕ ಎಂದು ಕೊಂಡೆ. ಆದರೆ ವಾದ್ಯಧ್ವನಿಯನ್ನು ಉತ್ತರಿಸಿ, ಜನರ ಕೋಲಾಹಲ ವನ್ನು ಸೀಳಿ, ಕದಿನಿಗಳ ಢಂಕಾರವನ್ನು ಮುಳುಗಿಸಿ, ಜೋಯಿಸರ ಮಂತ್ರ ಘೋಷವನ್ನೂ ಉಚ್ಚಳಿಸಿಕೊಂಡು, ನನ್ನ ಹೃದಯಾಂತರಾಳದಲ್ಲಿ ಅಂತ ರಾತ್ಮನ ವಾಣಿಯೊಂದು "ನೀನು ಮಿಥ್ಯಾಚಾರಿ! ನೀನು ಪತಿತ!

ನೀನು ಮೋಸಗಾರ!'' ಎಂದು ಮೊರೆಯಿತು. ಆಲಿಸಿದೆ; ಸ್ಪಷ್ಟವಾಗಿ ಕೇಳಿಸಿತು! ಆ ವಾಣಿ ಬರಬರುತ್ತ ಸಮೀಪವಾದಂತಾಗಿ ಗಟ್ಟಿಯಾಗಿ ಕೇಳಿಸತೊಡಗಿತು. ಅದು ನನ್ನ ರೋಹಿಣಿಯ ವಾಣಿಯಂತೆಯೇ ಇತ್ತು! ಅಧೀರನಾದೆ! ಮೈ ಬೆವರಿತು! ಜನರ ಸಂದಣಿಯಿಂದ ಹಾಗಾಗುವುದೆಂದು ಯೋಚಿಸಲು ಬಹಳ ಪ್ರಯತ್ನಪಟ್ಟೆ. ನಾನೋದಿದ ಮನಶ್ಶಾಸ್ತ್ರದ ಸಹಾಯದಿಂದ ಆ ವಾಣಿಯನ್ನು ವಿವರಿಸಿ ಕೊಳ್ಳಲು ಪ್ರಯತ್ನಪಟ್ಟೆ. ನಾಸ್ತಿಕನಾಗಿ ರೋಹಿಣಿಯನ್ನು ಶೂನ್ಯಮಾಡಲು ಸಾಹಸಮಾಡಿದೆ. ಆದರೆ ಆಗಲಿಲ್ಲ. ಮೂರ್ಛೆಯಿಂದ ಬಿದ್ದುಬಿಟ್ಟೆ! ಜನರ ಹಾಹಾಕಾರವೆದ್ದಿತು. ಗಾಳಿ ಬೀಸಿದರು. ತಣ್ಣೀರು ಎರಚಿದರು. ಬಹಳ ಹೊತ್ತಿನ ಮೇಲೆ ಎಚ್ಚರವಾಯಿತು. ಬಂಧುಗಳೆಲ್ಲರೂ ಜನರ ನೂಕುತಾಕಿನಿಂದ, ಆ ದಿನದ ಅಲ್ಪಾಹಾರದಿಂದ, ಸೆಕೆಯಿಂದ ನನಗೆ ಮೂರ್ಛೆ ಬಂದಿತು ಎಂದರು. ನಾನೂ ಹೌದು ಎಂದೆ.

ನನ್ನನ್ನು ಮಂಟಪದ ಹೊರಗೆ ತಂದರು. ಮೇಲೆ ಬಹು ದೂರದಲ್ಲಿ ಕೋಟಿ ನಕ್ಷತ್ರಗಣ ಸುಶೋಭಿತನಾಗಿದ್ದ ಸುಧಾಕರನ ಶೀತಲ ಸ್ವರ್ಣ ಮಂಡಲವು ಅಪಾರ ಅನಂತ ಮೇಘರಿಕ್ತ ನೀಲಾಕಾಶದಲ್ಲಿ ಮುಗುಳುನಗೆ ಬೀರುತ್ತಿತ್ತು. ಆ ಮುಗುಳುನಗೆ ನನಗೆ ಬಹು ದೂರವಾಗಿಬಿಟ್ಟಿದ್ದ ನನ್ನ ಪ್ರಥಮಾದರ್ಶದ ಕನಿಕರದ ಕಿರುನಗೆಯಂತೆ ರಂಜಿಸಿತು. ನನ್ನ ಕಣ್ಣು ಹನಿತುಂಬಿತು. ಕಂಬನಿಗಳು ಮಾಲೆಮಾಲೆಯಾಗಿ ಕೆನ್ನೆಯ ಮೇಲೆ ಇಳಿದುವು. ಏಕೆಂದರೆ ಅಂದು ನನ್ನ ರೋಹಿಣಿ ನಿಜವಾಗಿ ಮೃತಳಾದಳು!



# ಔದಾರ್ಯ

ನಾನು ಮಂಡ್ಯದಲ್ಲಿ ಅಮಲ್ದಾರನಾಗಿದ್ದೆ. ಅಲ್ಲಿಂದ ತೀರ್ಥಹಳ್ಳಿಗೆ ವರ್ಗವಾಯಿತು. ನನ್ನನ್ನು ಬೀಳ್ಕೊಳ್ಳುವಾಗ ನನ್ನ ಮಂಡ್ಯದ ಸ್ನೇಹಿತರೆಲ್ಲ ನಾನು ಉತ್ತರ ಧ್ರುವಕ್ಕೆ ಪ್ರವಾಸ ಹೊರಟೆನೋ ಎಂಬಂತೆ ಬಹಳ ಕಾತರರಾಗಿದ್ದರು. ಅವರ ಉದ್ವೇಗಕ್ಕೆ ಕಾರಣವೇನೆಂದು ಕೇಳಲು "ಅಯ್ಯೋ ಮಲೆನಾಡಿಗೆ ಹೋಗುತ್ತೀರಿ! ಬಹಳ ಕಷ್ಟ! ಮಲೇರಿಯಾ! ಮಳೆ! ಮಕ್ಕಳು ಮರಿಗಳಿದ್ದವರು ನೀವು. ಸೊಳ್ಳೆ ವಿಪರೀತವಂತೆ" ಎಂದು ಮೊದಲಾಗಿ ಕವಿಗಳು ನರಕದ ವರ್ಣನೆ ಮಾಡುವಂತೆ ಮಾಡಿಬಿಟ್ಟರು. ಆದರೆ ಕವಿಗಳಿಗೆ ನರಕದ ಪರಿಚಯವಿದ್ದುದೆಷ್ಟೋ ನನ್ನ ಮಿತ್ರರಿಗೆ ಮಲೆನಾಡಿನ ಪರಿಚಯವಿದ್ದುದೂ ಅಷ್ಟೆ!

ಏಕೆಂದರೆ ನಾನು ತೀರ್ಥಹಳ್ಳಿಗೆ ಹೋಗಿ ಸಂಸಾರದೊಂದಿಗೆ ನೆಲೆಸಿದಾಗ ನನ್ನ ಮಂಡ್ಯದ ಸ್ನೇಹಿತರ ಕಲ್ಪನೆಯೆಲ್ಲ ಕಟ್ಟುಕತೆ ಎಂದು ಗೊತ್ತಾಯಿತು. ತೀರ್ಥಹಳ್ಳಿ ಮಲೆನಾಡೇನೋ ಹೌದು. ಮಳೆಯೂ ಹೆಚ್ಚು. ಮಲೇರಿಯಾನೂ ಇದೆ, ಮಂಡ್ಯದಲ್ಲಿರುವಂತೆ; ಅಥವಾ ಇತರ ಕಡೆಗಳಲ್ಲಿರುವಂತೆ. ಈ ಭೂಮಿಯನ್ನು ಮಾಯೆ ಬಿಟ್ಟರೂ ಮಲೇರಿಯಾ ಬಿಡದು. ಜ್ಞಾನಿಗಳ ಹೃದಯದಲ್ಲಿಯೂ ಕೂಡ ಮಾಯೆಗೆ ಅವಕಾಶವಿಲ್ಲದಿದ್ದರೂ ಮಲೇರಿಯಾಕ್ಕೆ ಅವಕಾಶವಿದ್ದೇ ಇರುತ್ತದೆ. ಹೀಗಿರುವಾಗ ಮಲೇರಿಯಾ ಎಲ್ಲಿತಾನೆ ಇರುವುದಿಲ್ಲ! ಅಜಾಗರೂಕತೆಯಿಂದ ಇದ್ದರೆ ಎಲ್ಲಿದ್ದರೂ ರೋಗ ತಪ್ಪುವುದಿಲ್ಲ.

ಅದಕ್ಕೆ ಬದಲಾಗಿ ತೀರ್ಥಹಳ್ಳಿ ನನ್ನ ಮನಸ್ಸಿಗೆ ಬಹಳ ಮನೋಹರವಾಗಿ ತೋರಿತು. ಆ ದೃಶ್ಯಗಳನ್ನು ಮಂಡ್ಯದಲ್ಲಿ ಎಲ್ಲಿಂದ ತರುವುದು! ಊರು ಮಾಲೆಮಾಲೆಯಾಗಿ ಹಬ್ಬಿರುವ ಹಸುರು ಮಲೆಗಳ ಹದುಳ ತಕ್ಕೆಯಲ್ಲಿ ಮುದ್ದಾಗಿ ಮಂಡಿಸಿದೆ. ಅಲ್ಲದೆ ಹೆಚ್ಚು ಗಲಿಬಿಲಿ ಇಲ್ಲ. ಹತ್ತಿರದಲ್ಲಿಯೇ ತುಂಗಾನದಿ ಹರಿಯುತ್ತಿದೆ. ಅಲ್ಲಿ ಶಾಂತಿ, ಸೌಂದರ್ಯ,

ಸೌಭಾಗ್ಯ ಎಲ್ಲವೂ ತಕ್ಕಮಟ್ಟಿಗೆ ಶ್ಲಾಘನೀಯವಾಗಿಯೇ ಇದ್ದಂತೆ ನನಗೆ ಕಂಡುಬಂದಿತು. ಅಲ್ಲಿಯ ಜನಗಳು ದೇವತೆಗಳಲ್ಲದಿದ್ದರೂ ರಾಕ್ಷಸರೇನೋ ಅಲ್ಲವೆಂಬುದು ನಿಶ್ಚಯವಾಯಿತು.

ಇತರ ಊರುಗಳಲ್ಲಿರುವಂತೆ ಅಲ್ಲಿಯೂ ಪಾರ್ಟಿ ವ್ಯಾಜ್ಯಗಳಿರಬಹುದು. ಆದರೆ ಅದರಿಂದ ನನಗೆ ಯಾವ ತೊಂದರೆಯೂ ಸಂಭವಿಸಲಿಲ್ಲ. ಆ ಊರಿನ ಇನ್ನೊಂದು ಗುಣವೇನೊ ನನಗೆ ಅಲ್ಲಿಗೆ ಹೋದ ಸ್ವಲ್ಪ ದಿನಗಳಲ್ಲಿಯೇ ತಿಳಿದುಬಂದಿತು. ಅದೇನೆಂದರೆ ಆರಂಭ ಶೂರತ್ವ. ಅಲ್ಲಿಯ ಜನಗಳೇ ಅದಕ್ಕೆ ಬೇಕಾದಷ್ಟು ಉದಾಹರಣೆಗಳನ್ನೂ ಕೊಟ್ಟರು. ಅದರಲ್ಲಿ ಒಂದು ಯಾವುದೆಂದರೆ: ಅಲ್ಲಿ ಈಗ ಪಾಳಾಗಿರುವ ಹೆಂಚಿನ ಕಾರ್ಖಾನೆ. ಮೂಲಧನವೆಲ್ಲ ಕಾರ್ಖಾನೆ ಕಟ್ಟುವುದರಲ್ಲಿಯೆ ಪೂರೈಸಿ ಹೋಗಿ ಮುಂದೆ ಕೆಲಸಕ್ಕೆ ಕಾಸೇ ಉಳಿಯಲಿಲ್ಲವಂತೆ. ಇದರಲ್ಲಿ ಎಷ್ಟು ಸುಳ್ಳೋ, ಎಷ್ಟು ನಿಜವೋ, ಯಾರಿಗೆ ಗೊತ್ತು? ಅಂತೂ ನಾನು ಊರಿನ ಹೊರಗೆ ಸಂಚಾರ ಹೋಗುತ್ತಿದ್ದಾಗ ಹೊಳೆಯ ಪಕ್ಕದಲ್ಲಿ ಒಂದು ದೊಡ್ಡ ಕಟ್ಟಡವೇನೋ ಪಾಳಾಗಿದ್ದುದು ಕಣ್ಣಿಗೆ ಬೀಳುತ್ತಿತ್ತು.

ನನಗೆ ಚಿಕ್ಕಂದಿನಿಂದಲೂ ಪ್ರಕೃತಿಸೌಂದರ್ಯವೆಂದರೆ ಬಹಳ ಇಷ್ಟ. ಅದಕ್ಕಾಗಿಯೇ ನಾನು ಯಾವ ಊರಿನಲ್ಲಿದ್ದರೂ ವ್ಯಾಯಾಮದ ನೆವದಿಂದ ಬಹುದೂರ ಸಂಚಾರ ಹೋಗುವುದು ವಾಡಿಕೆ. ಅದರಲ್ಲಿಯೂ ತೀರ್ಥಹಳ್ಳಿಯಂತಹ ಊರಿನಲ್ಲಿ ಕೇಳಬೇಕೆ? ಎತ್ತ ಕಡೆ ಹೋದರೂ ಮೈಗೆ ವ್ಯಾಯಾಮ. ಎಲ್ಲಿ ನೋಡಿದರೂ ಕಣ್ಣಿಗೆ ಹಬ್ಬ. ಹೀಗಾಗಿ ನನ್ನ ವಾಯುಸಂಚಾರ ಹೆಚ್ಚಾಯಿತು. ಕೆಲವು ಸಾರಿ ಮನೆಗೆ ಬರುವುದು ರಾತ್ರಿ ಎಂಟು ಗಂಟೆಯಾಗಿಬಿಡುತ್ತಿತ್ತು. ನಮ್ಮ ಮನೆಯಾಕೆ ಸ್ವಲ್ಪ ಮುನಿದುಕೊಂಡು, "ಇದೇನು ಬಯಲು ಸೀಮೆ ಎಂದು ತಿಳಿದುಕೊಂಡಿರೇನೊ? ಬರಿಯ ಕಾಡು. ಐದು ಗಂಟೆಗೇ ಕತ್ತಲೆಯಾಗಿಬಿಡುತ್ತೆ. ಅದರಲ್ಲಿಯೂ ಹುಲಿ ಚಿರತೆಗಳ ಕಾಟ. ನೀವೊಬ್ಬರೇ ಹೀಗೆ ಅಲೆಯುವುದು ಒಳ್ಳೆಯದಲ್ಲ" ಎಂದು ಗದರಿಸಿದರು. ನಾನು ಮುಗುಳ್ನಗೆ ನಗುತ್ತ, ಇನಿಯಳ ಮುಂದೆ ಅದಕ್ಕಿಂತಲೂ ಪ್ರಬಲವಾದ ಪ್ರತಿವಾದವಿರಲಾರದೆಂದು ತಿಳಿದು ಸುಮ್ಮನಾಗಿಬಿಡುತ್ತಿದ್ದೆ.

ಒಂದು ದಿನ– ನಾನು ಹೋಗಿ ಇನ್ನೂ ಹದಿನೈದು ದಿನಗಳಾಗಿರಲಿಲ್ಲ –ಕಚೇರಿಯಲ್ಲಿ ಕೆಲಸ ಮುಗಿಯುವುದು ಆರೂವರೆ ಗಂಟೆಯಾಯಿತು. ಮನೆಗೆ ಬಂದೆ. ಸ್ವಲ್ಪ ಕಾಫಿ ತಿಂಡಿ ಪೂರೈಸಿಕೊಂಡು ಕೈಯಲ್ಲೊಂದು ಇಂಗ್ಲಿಷ್ ಕವನಗಳ ಪುಸ್ತಕ ತೆಗೆದುಕೊಂಡು ಹೊರಗೆ ಹೊರಟೆ. ಆಗಲೇ ಕತ್ತಲೆಯಾಗುತ್ತಿತ್ತು. ಆದರೆ ಹುಣ್ಣಿಮೆಯ ದಿನವಾದ್ದರಿಂದ ಬೇಕಾದಷ್ಟು ಬೆಳಕಿರುವುದೆಂದು ಧೈರ್ಯವಿತ್ತು. ನಮ್ಮಾಕೆ "ಇಷ್ಟು ಹೊತ್ತಿನಲ್ಲಿ ಎಲ್ಲಿಗೆ? ಅದರಲ್ಲಿಯೂ ಹುಣ್ಣಿಮೆಯ ದಿನ" ಎಂದು ಕೋಪಿಸಿಕೊಂಡು ಪೋಲೀಸು ರಂಗಪ್ಪನನ್ನು ಕರೆದು "ನೀನೂ ಹೋಗೊ ಅವರ ಜೊತೆಯಲ್ಲಿ" ಎಂದರು. ನಾನು ರಂಗಪ್ಪನಿಗೆ ಬರಬೇಡ ಎಂದು ಹೇಳಿ "ದೂರ ಎಲ್ಲಿಗೂ ಹೋಗುವುದಿಲ್ಲ. ರಾಮತೀರ್ಥದ ಬಂಡೆಗೆ ಹೋಗಿ ಈಗ ಬಂದುಬಿಡುತ್ತೇನೆ" ಎಂದು ಹೇಳಿ ನಮ್ಮಾಕೆಯನ್ನು ಸಂತೈಸಿ, ಜೊತೆಗೆ ತಾನೂ ಬರುತ್ತೇನೆಂದು ಹಟಹಿಡಿದ ರಾಮುವನ್ನು ಹೆದರಿಸಿ ಹಿಂದೆ ಬಿಟ್ಟು ಹೊರಟೆ. ನಮ್ಮ ಮನೆಗೂ ರಾಮತೀರ್ಥಕ್ಕೂ ಒಂದು ಫರ್ಲಾಂಗ್ ಕೂಡ ಆಗುತ್ತಿದ್ದಿಲ್ಲ. ಹತ್ತು ನಿಮಿಷದಲ್ಲಿಯೇ ಅಲ್ಲಿಗೆ ಹೋದೆ.

ನಾನು ತೀರ್ಥಹಳ್ಳಿಯ ರಾಮತೀರ್ಥದಂತಹ ಸೌಂದರ್ಯ ಸ್ಥಾನವನ್ನು ಬೇರೆ ಎಲ್ಲಿಯೂ ನೋಡಿಲ್ಲ. ಶೃಂಗೇರಿಯ ಸ್ನಾನ ಘಟ್ಟವೂ ಕೂಡ ರಾಮತೀರ್ಥದಷ್ಟು ರಮಣೀಯವಾದುದಲ್ಲ ಎಂದು ನನ್ನ ಭಾವನೆ. ರಾಮತೀರ್ಥವು ತುಂಗಾನದಿಯ ನಟ್ಟನಡುವೆ ಇರುವ ಒಂದು ಕಲ್ಲು ಮಂಟಪ. ಪರಶುರಾಮನು ತನ್ನ ತಾಯಿಯನ್ನು ಕಡಿದ ಮೇಲೆ ಕೊಡಲಿಯ ರಕ್ತವನ್ನು ಇನ್ನೆಲ್ಲಿಯೂ ತೊಳೆಯಲಾರದೆ ಇಲ್ಲಿಗೆ ಬಂದು ತೊಳೆದನಂತೆ. ಸುತ್ತಲೂ ಕಲ್ಲುಬಂಡೆಗಳು ಆನೆಗಳಂತೆಯೂ ತಿಮಿಂಗಿಲಗಳಂತೆಯೂ ಮಲಗಿವೆ. ನದಿಯ ನೀರು, ಕಲ್ಲುಗಳಮೇಲೆ ಹರಿಯುವುದರಿಂದ ಬಗ್ಗಡವಾಗದೆ ತಿಳಿಯಾಗಿ ಎಡೆಬಿಡದೆ ಮೊರೆಯುತ್ತ ಬಂಡೆಗಳಿಂದ ಹಾರಿ ಜಾರಿ ತುಂತುರು ತುಂತುರಾಗಿ ನೊರೆನೊರೆಯಾಗಿ ಸುಳಿಸುಳಿಯಾಗಿ ಸುತ್ತಿ ಹರಿಯುತ್ತದೆ. ಎಷ್ಟೊ ಶತಮಾನಗಳಿಂದ ಹೊಳೆ ಹರಿದೂ ಹರಿದೂ ಕಲ್ಲುಬಂಡೆಗಳೆಲ್ಲ ಎಣ್ಣೆಯಂತೆ ನುಣುಪಾಗಿಹೋಗಿವೆ. ಅಲ್ಲಲ್ಲಿ

ನೀರು ಘೂರ್ಣಾಯಮಾನವಾಗಿ ಸುತ್ತಿಸುತ್ತಿ ಹಾಸುಬಂಡೆಗಳಲ್ಲಿಯೂ ನಿಲುಬಂಡೆಗಳಲ್ಲಿಯೂ ದೊಡ್ಡ ದೊಡ್ಡ ಒರಳುಗಳಾಗಿವೆ. ಆ ಒರಳುಗಳಲ್ಲಿ ಗೋಲಿಯಂತೆ ಗುಂಡಾದ ಹರಳುಗಳು ಕಲ್ಲು ಇಕ್ಕಿದ ತತ್ತಿಗಳಂತೆ ಸೊಗಸಾಗಿವೆ.

ನಾನು ಎತ್ತರವಾದ ಮಂಟಪದ ಬಂಡೆಯ ಮೇಲೆ ಕುಳಿತಿದ್ದೆ. ಅಷ್ಟರಲ್ಲಿ ಸಮೀಪವಾಗಿದ್ದ ದಿಗಂತದ ಹಸುರು ಮಲೆಗಳ ಮೇಲೆ ತಿಂಗಳು ಮೂಡಿದನು. ದಪ್ಪಗೆ ದುಂಡಗೆ ನೀಲಾಕಾಶದಲ್ಲಿ ತೇಲುವ ಹೊನ್ನಿನ ಚೆಂಡಿನಂತೆ ಜ್ಯೋತ್ಸ್ನಾವರ್ಷವನ್ನು ವಿಶ್ವದೆಲ್ಲೆಡೆಗೆ ಚೆಲ್ಲುತ್ತ ಮೂಡಿ ಬಂದನು. ಪೂರ್ಣಿಮಾನಿಶಾಕಾಂತನ ಆಗಮನ ಮಹೋತ್ಸವಕ್ಕೆಂದು ಬಾನ್ದೇವಿ ಗಗನವೇದಿಕೆಯಲ್ಲಿ ವಿರಚಿಸಿದ ರಂಗವಲ್ಲಿಯಂತೆ ಮುದ್ದಾಗಿ ಕಂಗೊಳಿಸುತ್ತಿದ್ದ ಬಿಳಿಯ ಬಣ್ಣದ ಪುಡಿಮುಗಿಲು ಬಣ್ಣವೇರಿ ಸುಣ್ಣದ ನೀರಿಗೆ ಅರಸಿನವೆರಚಿದಂತೆ ನಸುಕೆಂಪಾಯಿತು. ರಮಣೀಯವಾಗಿದ್ದ ದೃಶ್ಯ ರಮಣೀಯತರವಾಯ್ತು. ಕಲ್ಲಿನಿಂದ ಕಲ್ಲಿಗೆ ಧುಮುಕುತ್ತಿದ್ದ ಹೊಳೆಯ ನೀರು ತಿಂಗಳಬೆಳಕಿನಲ್ಲಿ ಸಹಸ್ರಾರು ಮಿಣುಕು ಹುಳುಗಳಂತೆ ಮಿರುಗತೊಡಗಿತು. ಮೆಲ್ಲಗೆ, ಬಹು ಮೆಲ್ಲಗೆ ತಂಗಾಳಿ ಬೀಸುತಿತ್ತು. ದೂರ ಪಶ್ಚಿಮದಿಕ್ಕಿನಿಂದ ಪರ್ವತ ಕಂದರಗಳ ನಡುವೆ ನುಗ್ಗಿ ಬಂದು ಕಾಣಿಸಿಕೊಂಡು ಮತ್ತೆ ಪೂರ್ವ ದಿಕ್ಕಿನ ಪರ್ವತಗಳ ಇಡುಕಿನಲ್ಲಿ ನುಸಿದು ಕಣ್ಮರೆಯಾಗುವ ತುಂಗೆ ಅನಂತದಿಂದ ಮಿಂಚಿ ಮರಳಿ ಅನಂತದಲ್ಲಿ ಮರೆಯಾಗುವ ದಿವ್ಯಭಾವದಂತೆ ಮಂಗಳ ಮನೋಹರವಾಗಿ ತೋರಿದಳು. ನದಿಯ ಇಕ್ಕೆಲಗಳಲ್ಲಿಯೂ ದಿಗಂತ ಪರ್ಯಂತವಾಗಿ ಹಬ್ಬಿ ಏರಿ ಕಿಕ್ಕಿರಿದ ಶ್ಯಾಮಲ ವನಮಾಲೆಗಳು ಹುಣ್ಣಿಮೆಯಿರುಳಿನ ಹೊಂಗನಸಿನಲ್ಲಿ ಮಲಗಿರುವ ಪಸುರ್ಗಡಲ ಪೆರ್ದೆರೆಗಳಂತೆ ಮಾಲೆಮಾಲೆಯಾಗಿ ರಂಜಿಸಿದುವು. ಹೊಳೆಯ ದಡದಲ್ಲಿದ್ದ ಅರಳಿಮರಗಳು ಎಲರೊಡನೆ ಮೊರೆದು ಗೊಣಗುತ್ತಿದ್ದುವು. ನಡುನಡುವೆ ಕೌಮುದಿಯ ಮಾಯೆಯಲ್ಲಿ ಕಣ್ಣಿಗೆ ಕಾಣದೆ ಗಗನತಲದಲ್ಲಿ ಹಾರಿ ಕೂಗುತ್ತಿದ್ದ ತೇನೆಹಕ್ಕಿಯೊಂದರ ಮಧುರಧ್ವನಿ ವಿರಹಿಯಾದ ಅಶರೀರ ಗಂಧರ್ವನ ಆಕಾಶವಾಣಿಯಂತೆ ಅಲ್ಲಿ ಇಲ್ಲಿ ವಿಸ್ಮಯಕಾರಿಯಾಗಿ ತೊಳಲುತ್ತಿತ್ತು. ನದಿಯ

ತೀರದಲ್ಲಿಯೇ ಇದ್ದ ರಾಮೇಶ್ವರ ದೇವಾಲಯದಿಂದ ಆಗಾಗ ಘಂಟೆಗಳ ಲೌಹರವವು ಕೇಳಿಬರುತ್ತಿತ್ತು. ಜೊತೆಗೆ ಊರಿನ ಬೀದಿಗಳಲ್ಲಿ ದಿಕ್ಕಿಲ್ಲದೆ ಅಲೆಯುತ್ತಿದ್ದ ಕತ್ತೆಗಳ ತೃಪ್ತಿಸೂಚಕ ವಿಕಟ ನಿರ್ಘೋಷವೂ ಕೇಳಿಸುತ್ತಿತ್ತು. ನಾನು ಅಲ್ಲಿಗೆ ಹೋದಾಗ ನಾಲ್ಕೈದು ಜನಗಳು ಜಪಮಾಡುತ್ತಿದ್ದರು. ಸ್ವಲ್ಪ ಹೊತ್ತಿನಲ್ಲಿಯೇ ಎಲ್ಲರೂ ಒಬ್ಬೊಬ್ಬರಾಗಿ ಹೊರಟು ಹೋದರು. ನಾನು "ಅಯ್ಯೋ ತಪಸ್ಸುಮಾಡಿ ಕಡೆಗೆ ಭಗವಂತನು ಪ್ರತ್ಯಕ್ಷನಾಗುವ ಹೊತ್ತಿಗೆ ಸರಿಯಾಗಿ ಪತಿತರಾಗುವ ಸಾಧಕರಂತೆ ತಿಂಗಳು ಮೂಡುವ ಹೊತ್ತಿಗೆ ಸರಿಯಾಗಿ ಎದ್ದುಹೋದರಲ್ಲಾ!" ಎಂದು ಮನಸ್ಸಿನಲ್ಲಿಯೆ ಮುಗುಳ್ನಗೆ ನಕ್ಕೆನು. ಅಂತೂ ಸ್ಥಳವು ಸಂಪೂರ್ಣವಾಗಿ ನಿರ್ಜನವಾಯಿತು. ನಾನು ಸೊಬಗನ್ನು ಸವಿಯುತ್ತ ಭಾವಪೂರ್ಣವಾದ ವಿಚಾರತರಂಗಗಳಲ್ಲಿ ತೇಲುತ್ತ ಕುಳಿತಿದ್ದೆ.

ಸ್ವಲ್ಪ ಹೊತ್ತಿನಲ್ಲಿಯೇ ನನಗೆ ತುಸು ದೂರದಲ್ಲಿ ಹಾಸುಬಂಡೆಗಳ ನಡುವೆ ತಿಂಗಳ ಬೆಳಕಿನಲ್ಲಿ ಮಿಂದು, ಬೆಳ್ಳಗೆ ಶೋಭಿಸುತ್ತಿದ್ದ ಮಳಲು ದಿಣ್ಣೆಯೊಂದರ ಮೇಲೆ ಯಾರೋ ನಡೆದು ಬರುವ ಸದ್ದಾಯಿತು. ಆ ಕಡೆಗೆ ತಿರುಗಿ ನೋಡಿದೆ, ಸ್ವಲ್ಪ ಕುತೂಹಲದಿಂದಲೇ! ಚಂದ್ರಿಕೆಯಲ್ಲಿ ಯಾರೋ ಒಬ್ಬರು ಬರುತ್ತಿದ್ದುದು ಅವರುಟ್ಟಿದ್ದ ಬಿಳಿಯ ಬಟ್ಟೆಗಳಿಂದ ಸ್ಪಷ್ಟವಾಗಿ ಕಂಡುಬಂದಿತು. ಆ ವ್ಯಕ್ತಿ ನನ್ನ ಕಡೆಗೇ ಅಥವಾ ನಾನಿದ್ದ ಕಡೆಗೇ ಬರುವಂತಿತ್ತು. ನನ್ನಂತೆಯೇ ಬೆಳ್ದಿಂಗಳನ್ನು ಸವಿಯಲು ಬಂದ ಯಾರೋ ಒಬ್ಬ ರಸಿಕರಿರಬೇಕೆಂದು ಊಹಿಸಿ, ನೋಡುತ್ತ ಕುಳಿತೆ. ವ್ಯಕ್ತಿ ಬರುತ್ತ ಬರುತ್ತ ನನಗೆ ಬಹಳ ಸಮೀಪವಾಯಿತು. ಉಟ್ಟಿದ್ದ ಬಿಳಿಯ ಪಂಚೆ ತೀಡುತ್ತಿದ್ದ ಸುಗಾಳಿಯಲ್ಲಿ ಪಟಪಟ ಸದ್ದುಮಾಡಿ ಹಾರುತ್ತಿತ್ತು. ನೋಡುತ್ತಿರಲು ವ್ಯಕ್ತಿ ನನಗೆ ಒಂದು ಮಾರು ದೂರದಲ್ಲಿ ನಿಂತು "ನಮಸ್ಕಾರ ಸ್ವಾಮಿ" ಎಂದಿತು. ಆ ಧ್ವನಿ ನನಗೆ ಎಲ್ಲಿಯೊ ಪರಿಚಯವಾಗಿದ್ದಂತೆ ಭಾಸವಾಯಿತು. ನಾನೂ ನಮಸ್ಕಾರ ಹೇಳಿ ವ್ಯಕ್ತಿಯ ಮುಖದ ಕಡೆ ನೋಡಿದೆ. ಬೆಳ್ದಿಂಗಳ ಮಬ್ಬಿನಲ್ಲಿ ನನಗೆ ಥಕ್ಕನೆ ಗುರುತಾಗಲಿಲ್ಲ.

ವ್ಯಕ್ತಿ "ತಮಗೆ ನನ್ನ ಗುರುತು ಸಿಕ್ಕಲಿಲ್ಲ ಎಂದು ತೋರುತ್ತದೆ" ಎಂದಿತು.

ನಾನು ಸ್ವಲ್ಪ ಬಾಗಿ ನೋಡಿ "ಡೇವಿಡ್ ಮಾಸ್ಟರಲ್ಲವೇ?" ಎಂದೆ.

"ಹೌದು ಸ್ವಾಮಿ. ನೋಡಿ ಬಹಳ ಕಾಲವಾಯಿತು."

"ಕೂತುಕೊಳ್ಳಿ" ಎಂದೆ. ಅವರು ನನ್ನ ಎದುರಾಗಿಯೆ ಹಾಸು ಬಂಡೆಯಮೇಲೆ ಕುಳಿತರು.

ನಾನು ಅವರನ್ನು ನೋಡದೆ ಬಹಳ ವರ್ಷಗಳಾಗಿದ್ದುವು. ಆಗ್ಗೂ ಈಗ್ಗೂ ಬಹಳ ಮಾರ್ಪಾಡಾಗಿದ್ದರು. ದೇಹ ಕ್ಷೀಣಿಸಿಹೋಗಿತ್ತು. ಮುಖದಲ್ಲಿ ಕಳೆಯೇ ತೋರಲಿಲ್ಲ. ಅಲ್ಲದೆ ಅವರ ಧ್ವನಿಯೂ ಪಾತಾಳ ಸ್ವರವಾಗಿತ್ತು. ಅವರ ಅಂಗಭಂಗಿಯೆಲ್ಲ ಜೀವನದಲ್ಲಿ ಬಹಳ ಜುಗುಪ್ಸೆ ಪಟ್ಟವರಂತಿತ್ತು.

ನಾನು ನಮ್ಮೂರಿನ ಎ. ವಿ. ಸ್ಕೂಲಿನಲ್ಲಿ ಓದುತ್ತಿದ್ದಾಗ ಅವರು ಮೇಷ್ಟರಾಗಿದ್ದರು. ಅವರಿಂದ ಎಷ್ಟೋ ಸಾರಿ ಹೊಡೆತ ತಿಂದಿದ್ದೆವು. ಡೇವಿಡ್ ಮಾಸ್ಟರೆಂದರೆ ಹುಡುಗರಿಗೆಲ್ಲ ಭಯ. ಒಂದುಸಾರಿ ನಮ್ಮೂರಿನ ಕೆರೆಯಲ್ಲಿ ಒಬ್ಬ ಹುಡುಗ ಮುಳುಗಿ ಸತ್ತನು. ಮರುದಿನ ಸ್ಕೂಲಿನಲ್ಲಿ ಹುಡುಗರಾದ ನಾವೆಲ್ಲ ಸೇರಿ ಅದನ್ನೇ ಕುರಿತು ಬಾಯಿಗೆ ಬಂದಂತೆಲ್ಲ ಮಾತಾಡುತ್ತಿದ್ದೆವು. ಆಗ ನಮ್ಮಲ್ಲಿ ಒಬ್ಬನು "ನೀರಿನಲ್ಲಿ ಮುಳುಗಿ ಸಾಯುವುದು ಬಹಳ ಸುಖವಂತೆ" ಎಂದು ತಾನು ಹಿರಿಯರಿಂದ ಕೇಳಿ ತಿಳಿದ ವಿಚಾರವನ್ನು ಸವಿಸ್ತಾರವಾಗಿ ಹೇಳಿದನು. ನಮ್ಮಲ್ಲಿ ಕೆಲವರದ್ದು ಸ್ವಲ್ಪ ವೈಜ್ಞಾನಿಕ ಪ್ರಕೃತಿಯಾಗಿತ್ತು. ಅವರು ಸಿದ್ಧಾಂತವನ್ನು ಕಾರ್ಯತಃ ಪ್ರಯೋಗಿಸಿಯೇ ಪರೀಕ್ಷಿಸಿ ಬಿಡಬೇಕೆಂದು ಮನಸ್ಸು ಮಾಡಿದರು. ಕೈಕೊಂಡ ಸಾಹಸದ ಆನಂದದ ಭರದಲ್ಲಿ ಪರಿಣಾಮವನ್ನು ಯಾರೊಬ್ಬರೂ ಯೋಚಿಸಲೇ ಇಲ್ಲ; ಅಥವಾ ಗಣನೆಗೆ ತರಲೇ ಇಲ್ಲ. ಆ ದಿನ ಸಾಯಂಕಾಲವೇ ನಾವೆಲ್ಲ ಸೇರಿ ಕೆರೆಯ ಬಳಿ ಹೋಗಿ ಕಿಟ್ಟುವನ್ನು ಬಲಾತ್ಕಾರದಿಂದ ಒಪ್ಪಿಸಿದೆವು. "ನೀನೇನೂ ಹೆದರಬೇಡ, ಸಾಯುವ ಸಮಯದಲ್ಲಿ ಹಾಗೆ ಕೂಗಿಬಿಡು; ನಾವು ಮೇಲೆತ್ತಿಬಿಡುತ್ತೇವೆ. ಆಗ ನಿನಗಾದ ಸುಖವನ್ನು ಹೇಳಬಹುದು," ಎಂದೆವು. ಅವನೂ ಒಪ್ಪಿದನು. ನಾವು ನಾಲ್ಕು ಹುಡುಗರು ಸೇರಿ ಅವನನ್ನು

ಎದೆಯೆತ್ತರ ನೀರಿಗೆ ಒಯ್ದು ಮುಳುಗಿಸಿದೆವು. ಅವನು ಐದಾರು ಕ್ಷಣಗಳಲ್ಲಿಯೆ ಚಿಮ್ಮಿ ಒದ್ದಾಡಲಾರಂಭಿಸಿದನು. ಕರಾರಿನಂತೆ ಅವನು "ಸತ್ತೇ!" ಎಂದು ಕೂಗಿದ್ದರೆ ನಾವು ಅವನನ್ನು ಆ ರೀತಿ ಅಮುಕುತ್ತಿರ ಲಿಲ್ಲ. ಅವನು ಸ್ವಲ್ಪವೂ ಸದ್ದುಮಾಡದೆ ಬರಿದೆ ಒದ್ದಾಡುತ್ತಿದ್ದುದರಿಂದ ಅದುಮಿದೆವು. ನೀರಿನೊಳಗೆ ಕೂಗಲಾಗುವುದೂ ಇಲ್ಲ. ಕೂಗಿದರೆ ಕೇಳಿಸುವುದೂ ಇಲ್ಲ ಎಂಬುದು ಆಗಿನ್ನೂ ನಮ್ಮ ವಿಜ್ಞಾನ ಪ್ರಪಂಚಕ್ಕೆ ತಿಳಿದಿರಲಿಲ್ಲ. ಅವನ ಒದ್ದಾಟ ಹೆಚ್ಚಾಯಿತು. ಬಹಳ ಹೆಚ್ಚಾಯಿತು. ಅಯ್ಯೋ ನಮ್ಮ ಪ್ರಯೋಗವೆಲ್ಲ ಎಲ್ಲಿ ಹಾಳಾಗಿಬಿಡುವುದೋ ಎಂದು ಭಯವಾಯಿತು. ದಡದಲ್ಲಿದ್ದ ನಮ್ಮವರು ವಿಧವಿಧವಾದ ಸ್ವರ ಮತ್ತು ಕರತಾಳಗಳಿಂದ ನಮ್ಮನ್ನು ಹುರಿದುಂಬಿಸುತ್ತಿದ್ದರು. ಬರುತ್ತಬರುತ್ತ ಕಿಟ್ಟು ಒದ್ದಾಡಿಕೊಳ್ಳುವುದು ಕಡಿಮೆಯಾಯಿತು. ಅದನ್ನು ಸುಖಾನು ಭವದ ಚಿಹ್ನೆ ಎಂದು ಊಹಿಸಿ ನಮ್ಮ ಪ್ರಯೋಗಪರೀಕ್ಷೆ ಜಯಪ್ರದ ವಾಯಿತೆಂದು ಹಿಗ್ಗಿದೆವು. ಅಷ್ಟರಲ್ಲಿ ನಮ್ಮ ಡೇವಿಡ್ ಮೇಷ್ಟರು ಹಠಾತ್ತಾಗಿ ಅಲ್ಲಿಗೆ ಬಂದು, ಆಗುವುದರಲ್ಲಿದ್ದ ಅನಾಹುತವನ್ನು ತಪ್ಪಿಸಿದರು. ಅಲ್ಲದೆ ಕೆರೆಯ ಹಸುರಂಚಿನಲ್ಲಿಯೇ ನಮಗೆ ಚೆನ್ನಾಗಿ ಬಿಸಿಬಿಸಿ ಪೂಜೆಯೂ ಆಯಿತು. ಹೀಗೆ ನನ್ನ ಬಾಲ್ಯ ಜೀವನ ರಂಗದಲ್ಲಿ ಡೇವಿಡ್ ಮೇಷ್ಟರೊಬ್ಬರು ಬಹುಮುಖ್ಯ ಪಾತ್ರಧಾರಿಗಳಾಗಿದ್ದರು.

ಬೆಳ್ದಿಂಗಳಲ್ಲಿ ಬೆಳ್ಳಗೆ ನನ್ನೆದುರು ಕುಳಿತ ಕೃಶವಾದ ಮೂರ್ತಿಯನ್ನು ನೋಡಿ ನನಗೆ ಹಿಂದಿನ ನೆನಪುಗಳೆಲ್ಲ ಹೊಸದಾಗಿ ಚಿಗುರಿದಂತಾಯಿತು. ಊರು ಬಿಟ್ಟು ನಾವು ಬಹು ದೂರದಲ್ಲಿರುವಾಗ ನಮ್ಮೂರಿನವರು ಯಾರಾದರಾಗಲಿ ಒಬ್ಬರು ಅಲ್ಲಿಗೆ ಬಂದರೆ ನಮಗೆಷ್ಟು ಸಂತೋಷವೋ ಹಾಗೆಯೇ ಬಾಲ್ಯವನ್ನು ಬಿಟ್ಟು ಬಹು ದೂರ ಕಾಲವಾಹಿನಿಯಲ್ಲಿ ತೇಲಿ ಹೋದಮೇಲೆ ಬಾಲ್ಯ ಜೀವನದ ಸ್ಮೃತಿಯನ್ನು ತಂದು ಕೊಡುವ ಪ್ರತಿಯೊಂದು ವಸ್ತುವೂ ನಮಗೆ ಪ್ರಿಯವಾಗುತ್ತದೆ.

ನಾನು ಕೂತುಕೊಳ್ಳಿ ಎಂದಾಗ ಕೂತುಕೊಂಡ ಡೇವಿಡ್ ಮೇಷ್ಟರು ಮಾತಾಡಲೂ ಇಲ್ಲ; ಅಲುಗಾಡಲೂ ಇಲ್ಲ. ಏನೋ ವ್ಯಸನ ಭಾರದಿಂದ ತಲೆಬಾಗಿ ಕುಳಿತಂತೆ ತೋರಿತು. ಬಹಳ ಕಾಲದಮೇಲೆ

ಭೇಟಿಯಾದ ಹಿರಿಯರೊಡನೆ ಮಾತಾಡದೆ ಸುಮ್ಮನೆ ಕುಳಿತಿರುವುದು ಮರ್ಯಾದೆಯಲ್ಲವೆಂದು ತಿಳಿದು ನಾನೆ ಮೊದಲುಮಾಡಿದೆ.

"ನೀವೀಗ ಇಲ್ಲಿಯೇ ಇರುವುದೇನು?" ಎಂದೆ.

"ಹೌದು; ಈಗ ಇಲ್ಲಿಯೇ ಇದ್ದೇನೆ" ಎಂದರು. ಅವರು ಉತ್ಸಾಹಪೂರ್ವಕವಾಗಿ ಮಾತಾಡುವುದನ್ನು ಮರೆತು ಬಹು ಕಾಲವಾದಂತೆ ತೋರಿತು.

"ನಿಮಗೆ ಇಲ್ಲಿಗೆ ವರ್ಗವಾದ್ದು ಯಾವಾಗ?"

"ಏನೋ ಸ್ವಾಮಿ! ನನ್ನ ಗೋಳು ಜಗದೀಶ್ವರನಿಗೂ ಬೇಡವಾಗಿದೆ!"

"ನಿಮ್ಮ ಕುಟುಂಬ ಸುಖವಾಗಿದ್ದಾರೆಯೆ?"

"ಸುಖವಾಗಿದ್ದರು!" ಎಂದು ನೀಳವಾಗಿ ಸುಯ್ದರು.

ನಾನು ಸ್ವಲ್ಪ ಅಪ್ರತಿಭನಾದೆ. ಏನು ಮಾಡಬೇಕೆಂದು ತೋರಲಿಲ್ಲ. ಏನು ಆಡಿದರೂ ಅದೆಲ್ಲವೂ ಅವರ ನೋವನ್ನು ಮರಳಿ ಕೆಣಕಿದಂತೆ ತೋರುತ್ತಿತ್ತು.

"ತಮಗೆ ಮಕ್ಕಳಿದ್ದಾರೆಯೆ?" ಎಂದೆ.

"ಒಬ್ಬನು ಇದ್ದ" ಎಂದು ಮಾತ್ರ ನೀಳವಾಗಿ ಸುಯ್ದರು. ಸುಯ್ದವರು ಹೇಳತೊಡಗಿದರು. ಕಟ್ಟಿಕಟ್ಟಿ ನಿಲ್ಲಿಸಿದ್ದ ದುಃಖವೆಲ್ಲ ಒಂದೇಸಾರಿ ಕಟ್ಟೆಯೊಡೆದು ಧುಮುಕಿದಂತಾಯಿತು. "ಅಯ್ಯೋ, ನಾನೇನು ಪಾಪಮಾಡಿ ಹುಟಿದ್ದೇನೋ ನಾನರಿಯೆ. ನನ್ನ ಮೊದಲನೆ ಹೆಂಡತಿ ನನಗೆ ಸಾಕ್ಷಾತ್ ಲಕ್ಷ್ಮಿಯಂತಿದ್ದರು. ಇಬ್ಬರೂ ಸೇರಿ ಸುಖವಾಗಿ ಆರುವರ್ಷ ಸಂಸಾರ ಮಾಡಿದೆವು. ಬರುತ್ತಿದ್ದುದು ಹದಿನೈದು ರೂಪಾಯಿ ಸಂಬಳವಾದರೂ ನೆಮ್ಮದಿಯಿಂದಿದ್ದೆವು. ಆಕೆ ಒಂದು ಗಂಡು ಕೂಸನ್ನು ಹೆತ್ತು ಕಣ್ಣುಮುಚ್ಚಿಕೊಂಡರು."

ಡೇವಿಡ್ ಮೇಷ್ಟರು ಆಗತಾನೆ ಹೆಂಡತಿ ಸತ್ತವರಂತೆ ಅಳತೊಡಗಿದರು. ನನಗೂ ಕಣ್ಣಿನಲ್ಲಿ ನೀರು ಬಂತು. ಮತ್ತೆ ಹೇಳಿದರು:

"ಅಷ್ಟಕ್ಕೇ ಕೊನೆಗಾಣಲಿಲ್ಲ ಸ್ವಾಮಿ, ನನ್ನ ಅನಿಷ್ಟ. ಸ್ವಲ್ಪಕಾಲ ಪತ್ನೀವಿಯೋಗ ದುಃಖದಲ್ಲಿಯೇ ನವೆದೆ. ಕಷ್ಟಪಟ್ಟು ಮಗುವನ್ನು

ನಾಲ್ಕೈದು ತಿಂಗಳು ಸಾಕಿದೆ. ನಾನು ಸ್ಕೂಲಿಗೆ ಹೋಗುವಾಗ ನಮ್ಮ ಬಂಧುಗಳೊಬ್ಬರ ಮನೆಯಲ್ಲಿ ಮಗುವನ್ನು ಬಿಟ್ಟುಹೋಗುತ್ತಿದ್ದೆ. ಕಡೆಗೆ ಎಷ್ಟು ದಿನ ಹೀಗೆ ಕಷ್ಟಪಡುವುದೆಂದು ಪುನಃ ಮದುವೆಯಾಗಲು ಆಲೋಚಿಸಿದೆ.

"ನಾನು ಯಾರ ಮನೆಯಲ್ಲಿ ಕೂಸನ್ನು ಬಿಟ್ಟು ಹೋಗುತ್ತಿದ್ದೆನೋ ಅವರ ಮನೆಯಲ್ಲಿ ವಿವಾಹಕ್ಕೆ ಸಿದ್ಧಳಾದ ಒಬ್ಬ ಯುವತಿ ಇದ್ದಳು. ಆಕೆಯೇ ನನ್ನ ಮಗುವನ್ನು ತಾಯಿಯಂತೆ ನೋಡಿಕೊಳ್ಳುತ್ತಿದ್ದಳು. ತಾಯಿಯಂತೆಯೇ ಇರುವವಳು ತಾಯಿಯೇ ಏಕೆ ಆಗಿಬಿಡಬಾರದೆಂದು ನಾನು ಅವಳನ್ನು ಮದುವೆಯಾದೆ. ಆಕೆಗೆ ಅದೇ ಊರಿನಲ್ಲಿಯೆ ಗರ್ಲ್ ಸ್ಕೂಲಿನಲ್ಲಿ ಉಪಾಧ್ಯಾಯಿನಿಯ ಕೆಲಸವಿತ್ತು.

"ಮದುವೆಯಾದ ಕೆಲವು ದಿನಗಳಲ್ಲಿಯೇ ಆಕೆಯ ನಡತೆ ವ್ಯತ್ಯಾಸ ವಾಗತೊಡಗಿತು. ಮಗುವನ್ನು ಆದರದಿಂದ ನಾಕುತ್ತಿದ್ದವಳು ಈಗ ಔದಾಸೀನ್ಯದಿಂದ ನೋಡುವಂತೆ ತೋರಿತು. ಮೊದಲು ನನ್ನೊಡನೆ ಆಡುತ್ತಿದ್ದ ಮೃದುವಾದ ಮಾತುಗಳು ಬರಬರುತ್ತ ಕಠಿನವಾದುವು. ನನ್ನ ಸಂಸಾರವೆಂದರೆ ಆಕೆಗೆ ತಿರಸ್ಕಾರ ಹುಟ್ಟಿತು. ನನಗೂ ಆಕೆಯಲ್ಲಿ ಸ್ವಲ್ಪ ಅವಿಶ್ವಾಸವುಂಟಾಯಿತು. ಮನೆಯಲ್ಲಿ ದುಂದುವೆಚ್ಚಕ್ಕಾರಂಭ ವಾಯಿತು. ಸಾಲವಾಯಿತು. ಮಗುವೂ ಕೊರಗಿ ಕೊರಗಿ ಬೆಳೆಯುತ್ತಿತ್ತು. ಅದನ್ನೆಲ್ಲಾ ನೋಡಿ ನನಗೆ ಜುಗುಪ್ಸೆ ಹುಟ್ಟಿತು. . ಕಡೆಗೆ ಆಕೆಗೂ ಆಕೆಯ ಶಾಲೆಯ ಉಪಾಧ್ಯಾಯರೊಬ್ಬರಿಗೂ ಇರುವ ದುಷ್ಟಸಂಬಂಧವೂ ನನಗೆ ಗೊತ್ತಾಯಿತು. . ಆದರೂ ನಾನು ಔದಾರ್ಯದಿಂದ, ನಾಗರಸದೃಶ ವಾದ ಔದಾರ್ಯದಿಂದ ಜೀವನಯಾಪನೆ ಮಾಡುತ್ತಿದ್ದೆ. . ಸ್ವಾಮಿ, ದುಡ್ಡು ಕೊಟ್ಟು ಔದಾರ್ಯತೋರಿಸಬಹುದು ; ಭೂಮಿ ಕೊಟ್ಟು ಔದಾರ್ಯ ತೋರಿಸ ಬಹುದು ; ತನ್ನನ್ನೇ ಕೊಂದವನನ್ನೂ 'ಕ್ಷಮಿಸು ದೇವ' ಎಂದು ಕ್ರಿಸ್ತ ಸ್ವಾಮಿಯಂತೆ ಔದಾರ್ಯ ತೋರಿಸಬಹುದು. . ಆದರೆ ನಾನು ತೋರಿಸಿದ ಔದಾರ್ಯ ಇದೆಲ್ಲವನ್ನೂ ಮೀರಿದುದೆಂದು ನನ್ನ ಭಾವನೆ! . . ನನಗೆ ಆ ಊರಿಂದ ಇಲ್ಲಿಗೆ ವರ್ಗವಾಯಿತು. ಬೇಡ ಎಂದು ಅರ್ಜಿ ಹಾಕಿ ಬೇಡಿ ಕೊಂಡೆ. ಕಡೆಗೆ ಆಕೆಯನ್ನೂ ಇಲ್ಲಿಗೆ ವರ್ಗಮಾಡಿಕೊಡಿ ಎಂದು ಬರೆದು

ಕೊಂಡೆ. . ಅಯ್ಯೋ ಆ ಮಗುವು ಆಕೆಯನ್ನೇ ತಾಯಿಯೆಂದು ತಿಳಿದು ಬಿಟ್ಟಿತು!. . ನಾನು ಇಲ್ಲಿಗೆ ಬಂದು ಆರು ತಿಂಗಳು ಎಷ್ಟು ನೊಂದೆನೋ ಈ ಕಲ್ಲಿಗೇ ಗೊತ್ತು! ಇಲ್ಲಿಯೇ ಕುಳಿತು ಅಳುತ್ತಿದ್ದೆ!. . ಒಂದು ದಿನ ಕಾಗದ ಬಂತು, ಮಗು ತೀರಿಹೋಯಿತೆಂದು! ನನಗೂ ಈ ಶೋಕ ಮಯ ಭೂಮಿಗೂ ಇದ್ದ ಒಂದೇ ಒಂದು ಮುದ್ದಾದ ಪುಟ್ಟ ಬಂಧನವು ಹರಿದುಹೋಯಿತು. . ನಾನು ರಜಾ ತೆಗೆದುಕೊಂಡು ಅಲ್ಲಿಗೆ ಹೋದೆ. ನನ್ನ ಹೆಂಡತಿ ಮಗುವನ್ನು ಹೂಳಿಸಿಬಿಟ್ಟಿದ್ದಳು. ಆ ಸ್ಮಶಾನಕ್ಕೆ ಹೋಗಿ ನನ್ನ ಕಂದನ ಗೋರಿಯ ಬಳಿ ಒಬ್ಬನೇ ಕುಳಿತುಕೊಂಡು ಅತ್ತೆ. . ಮಗು ಅನಾದರದಿಂದಲೇ ತೀರಿ ಹೋಯಿತೆಂದು ಗೊತ್ತಾಯಿತು. . ಪುನಃ ಇಲ್ಲಿಗೆ ಹೊರಟು ಬಂದೆ. . ನನಗೆ ಜಗತ್ತೇ ಒಲ್ಲದಾಯಿತು. ಮಗುವನ್ನು ನೆನೆನೆನೆದು ಅಳುವುದೇ ಕೆಲಸವಾಯಿತು. . ಬೈಬಲ್ಲನ್ನು ತೆಗೆದು ಓದಿದೆ. ಯಾವುದೂ ಮನಸ್ಸಿಗೆ ಶಾಂತಿಯನ್ನು ತರಲಿಲ್ಲ. ಸತ್ತವರು ಒಂದು ಕಡೆ ಸೇರಿ ಕಡೆಯ ದಿನವನ್ನು ಕಾಯುವರು ಎಂದು ಅದರಲ್ಲಿದೆ ಎಂದು ಅರ್ಥ ಮಾಡಿ, ಸತ್ತರೆ ನನ್ನ ಮೊದಲನೆ ಹೆಂಡತಿ ಮತ್ತು ಮಗುವನ್ನು ಸೇರ ಬಹುದೆಂದು ನಿರ್ಣಯಿಸಿದೆ. ಆದರೆ ಹೇಗೆ ಸಾಯುವುದು? ಆತ್ಮಹತ್ಯ ಪಾಪ ಎಂದು ಗೊತ್ತಿತ್ತು. ಭಗವಂತನು ನನ್ನ ಆತ್ಮಹತ್ಯವನ್ನು ಪಾಪ ವೆಂದು ಗಣಿಸುವುದಿಲ್ಲ ಎಂದು ಹಾರೈಸಿ ಪ್ರಾರ್ಥಿಸಿದೆ. ಅಂತೂ ಹೇಗಾದರೂ ಮಾಡಿ ಈ ಲೋಕ ಬಿಡಬೇಕೆಂದು ನಿರ್ಣಯಿಸಿದೆ. ಲೋಕ ನನ್ನನ್ನು ಹೇಡಿಯೆಂದು ಕರೆಯಬಹುದು. ಹಾಗೆಯೇ ಕ್ಷಯರೋಗವೂ ತನ್ನಿಂದ ತಪ್ಪಿಸಿಕೊಳ್ಳಲೆಳಸುವ ರೋಗಿಯನ್ನು ಹೇಡಿ ಎಂದು ಕರೆಯ ಬಹುದಲ್ಲವೆ?

"ಮುಂಗಾರು ಪ್ರಾರಂಭವಾಗಿತ್ತು. ಆಗ ಈ ಹೊಳೆಯಲ್ಲಿ ನೀರು ಇದಕ್ಕಿಂತ ಸ್ವಲ್ಪ ಹೆಚ್ಚಾಗಿತ್ತು. . ನಾನು ಒಂದು ಕಾಗದ ಬರೆದಿಟ್ಟು ಇಲ್ಲಿಗೆ ಬಂದೆ. ಕಾಗದದಲ್ಲಿ ನನ್ನ ಎರಡನೆ ಹೆಂಡತಿಯನ್ನು ಸ್ವಲ್ಪವೂ ನಿಂದಿಸಲಿಲ್ಲ. ಆಕೆ ಒಳ್ಳೆಯವಳೆಂದೇ ಬರೆದೆ. ಏಕೆಂದರೆ ನಾನು ಅವಳನ್ನು ನಿಂದಿಸಿ ಬರೆದರೆ ಲೋಕ ನನಗಾದಂತೆ ಅವಳಿಗೂ ವಿಷಮಯ ವಾಗಿಬಿಡುವುದೆಂದು ಯೋಚಿಸಿದೆ. ಅಲ್ಲದೆ ಆಕೆಯ ಎರಡನೆ ಮದುವೆಗೆ

ಅಡಚಣೆಯಾಗುವುದೆಂದು ಎದೆಗರಗಿದೆ. ಕಾಗದದಲ್ಲಿ ಮಗು ಸತ್ತು ದನ್ನೂ ನನ್ನನ್ನು ವರ್ಗಾಯಿಸಿದುದನ್ನೂ ಆತ್ಮಹತ್ಯಕ್ಕೆ ಕಾರಣಗಳಾಗಿ ಒಡ್ಡಿದ್ದೆ......

"ಇಲ್ಲಿಗೆ ಬಂದೆ. ಕತ್ತಲು ಕವಿದಿತ್ತು. ಸೋನೆ ಮಳೆ ಸುರಿಯು ತ್ತಿತ್ತು. ಇದೇ ಬಂಡೆಯಮೇಲೆ ನಿಂತು ಯೋಚಿಸಿದೆ. ಸಾವಿಗಿಂತಲೂ ಸಾಯುವ ನೋವು ಭಯಂಕರವಾಗಿ ತೋರಿತು. ಆತ್ಮಹತ್ಯ ಮನುಷ್ಯನಿಗೆ ಯೋಗ್ಯವಲ್ಲ ಎಂದುಕೊಂಡೆ. ಮತ್ತೆ ನನ್ನ ಸ್ಥಿತಿಗತಿಗಳು ನೆನಪಿಗೆ ಬಂದುವು. ಆ ನೋವಿನ ಮುಂದೆ ಸಾಯುವ ನೋವು ಕಿರಿದಾಯಿತು. ಅಲ್ಲದೆ ಸತ್ತಮೇಲೆ ಹೆಂಡತಿ ಮಕ್ಕಳೊಡನೆ ಬಾಳುವೆನು ಎಂಬ ಆಹ್ಲಾದವೆ ಹೊಳೆಯ ಪ್ರವಾಹವಾಗಿ ಹರಿಯುವಂತೆ, ಕರೆಯುವಂತೆ ಭಾಸವಾಯಿತು.. ಹಾರಿಬಿಟ್ಟೆ!.. ಪ್ರವಾಹವು ಕೊಚ್ಚಿ ಬಂಡೆಯಿಂದ ಬಂಡೆಗೆ ನನ್ನನ್ನು ಅಪ್ಪಳಿಸಿತು.. ಅಯ್ಯೋ ಹಾರಿದ್ದು ತಪ್ಪಾಯ್ತು ಎಂದು ಕೊಂಡೆ. ನನ್ನ ಶಕ್ತಿಯನ್ನೆಲ್ಲ ವೆಚ್ಚಮಾಡಿ ಯಾವುದಾದರೂ ಒಂದು ಬಂಡೆಯನ್ನೇರಲು ಬಹಳ ಪ್ರಯತ್ನಪಟ್ಟೆ. ಆದರೆ ಅಧಿಕಾರಯುಕ್ತವಾದ ನಿಷ್ಕರುಣ ಪ್ರವಾಹ ನನ್ನನ್ನು ಬಡಿದು ಬಡಿದು ಮುಳುಗಿಸಿಯೇ ಬಿಟ್ಟಿತು!...."

ನಾನು ಉದ್ವೇಗದಿಂದ "ಕಡೆಗೆ ಹೇಗೆ ಮೇಲಕ್ಕೆ ಬಂದಿರಿ?" ಎಂದೆ. ಯಾರೋ ಕರ್ಕಶವಾಗಿ ಕಿಲಕಿಲ ನಕ್ಕಂತಾಯಿತು. ನೋಡಿದರೆ ಡೇವಿಡ್ ಮೇಷ್ಟರು ಮಾಯವಾಗಿದ್ದರು. ಬೆಳ್ದಿಂಗಳು ಕಾಡುಗಳ ಮೇಲೆ ಮಲಗಿತ್ತು. ಹೊಳೆ ಹರಿಯುತ್ತಿತ್ತು. ನಾನು ಬೇಗಬೇಗನೆ ಎದ್ದು ಮನೆಯ ಕಡೆಗೆ ಹೊರಟೆ. ನನ್ನ ಮೈಯೆಲ್ಲ ಬೆವರಿತು. ಸ್ವಲ್ಪದೂರ ಹೋಗುವುದರೊಳಗೆ ಯಾರೋ ಇಬ್ಬರು ನನ್ನೆಡೆಗೆ ಬರುತ್ತಿದ್ದರು. ಗಟ್ಟಿಯಾಗಿ ಮಾತಾಡಿಕೊಂಡು ಬರುತ್ತಿದ್ದರು. ಮೊದಲು ಅವರಲ್ಲಿ ನಂಬಿಕೆ ಹುಟ್ಟಲಿಲ್ಲ. ಕಡೆಗೆ ಜವಾನರೆಂದು ಗೊತ್ತಾಗಿ ಬಹಳ ಧೈರ್ಯ ವಾಯಿತು. ಆದರೂ "ಏತಕ್ಕೆ ಬಂದಿರೋ ನೀವು?" ಎಂದು ಗದರಿದೆ.

"ಅಮ್ಮಾವರು ಕಳಿಸಿದರು. ಗಂಟೆ ಒಂಬತ್ತಾಯ್ತು. ಹೋಗಿ ನೋಡಿಕೊಂಡು ಬನ್ನಿ ಎಂತ" ಎಂದರು.

“ನಿಮ್ಮಲ್ಲಿ ಯಾರಾದರೂ ಗಟ್ಟಿಯಾಗಿ ನಕ್ಕಿರೇನೊ” ಎಂದು ಕೇಳಿದೆ.

“ಇಲ್ಲ ಸ್ವಾಮಿ” ಎಂದರು.

“ಇನ್ನೇನಾದರೂ ಸದ್ದು ಕೇಳಿಸಿತೇ?” ಎಂದೆ.

“ನಾವು ಬಂದದ್ದು ಕಂಡು ಒಂದು ಹಾಲಕ್ಕಿ ಕಿರಿಚಿಕೊಂಡು ಹಾರಿಹೋಯಿತು, ಸ್ವಾಮಿ.”

ನಾನು ಹಿಂತಿರುಗಿ ನೋಡಿದೆ. ರಾಮತೀರ್ಥ! ಚಂದ್ರ, ಆಕಾಶ, ಮುಗಿಲು, ವನ, ಪರ್ವತಶ್ರೇಣಿ, ನದಿ, ಬಂಡೆ, ಮಳಲು ದಿಣ್ಣೆ—ಎಲ್ಲವೂ ಮೊದಲಿನಂತೆಯೆ ನಲಿಯುತ್ತಿದ್ದುವು. ಆದರೆ ಯಾವುದೂ ಸುಂದರವಾಗಿ ಕಾಣಲಿಲ್ಲ. ಅದಕ್ಕೂ ಔದಾರ್ಯ ಬೇಕು! ಕಡಿದು ಓಡುವ ನಾಗರ ಹಾವಿನ ಹೆಡೆಯಲ್ಲಿ ಸೊಬಗನ್ನು ಕಾಣಲು ಔದಾರ್ಯವಿರಬೇಕು! ಎಂದು ಕೊಂಡು ಮನೆಗೆ ಹೋದೆ.

ಯಾರೊಡನೆಯೂ ನನ್ನ ಅನುಭವದ ಪ್ರಸ್ತಾಪವೆತ್ತಲಿಲ್ಲ.

---

# 'ಗಂಟು' ಅಥವಾ ಗುಪ್ತ ಧನ

ಚೈತ್ರ ಸಂಧ್ಯೆಯ ಹೊಂಬಿಸಿಲು ಪಶ್ಚಿಮ ದಿಕ್ಕಿನಲ್ಲಿ ರಂಜಿಸುತ್ತಿದ್ದ ಕುಂಕುಮವರ್ಣದ ಮುಗಿಲುಗಳಿಂದ ತುಳುಕಿ ಬಂದು ನಾಡು ಕಾಡು ಗಳನ್ನೆಲ್ಲ ತಬ್ಬಿ ಮನೋಹರವಾಗಿತ್ತು. ಮೊದಲ ಮುಂಗಾರಿನ ಮೊದಲ ಮಳೆಯು ತೊಯ್ದ ನೆಲದಲ್ಲಿ ಹಸುರುಹುಲ್ಲು ಚಿಲುಮೆ ಚಿಮ್ಮಿದಂತಿತ್ತು, ಮೆತ್ತೆ ಹಾಸಿದಂತಿತ್ತು; ಕಣ್ಣಿಗೂ ಮನಸ್ಸಿಗೂ ಏನೋ ಒಂದು ಹೊಸ ಹುರುಪು ಕೊಡುತ್ತಿತ್ತು; ಚೇತನ ಮಣ್ಣಿನಲ್ಲಿಯೂ ಅಂತರ್ಯಾಮಿ ಯಾಗಿದೆ ಎನ್ನುವುದಕ್ಕೊಂದು ಮೂಕಸಾಕ್ಷಿಯಾಗಿತ್ತು. ಹೊಸ ಮಳೆ ಯಲ್ಲಿ ಮಿಂದ ಕಾಡುಗಳಲ್ಲಂತೂ ಹಸುರಿಗೆ ಹುಸುರೇರಿ ಎತ್ತ ನೋಡಿದರೂ ಬಣ್ಣಗಳಲ್ಲೆಲ್ಲ ಹಸುರೇ ಸರ್ವವ್ಯಾಪಿಯಾಗಿ ಸಾಮ್ರಾಜ್ಯವಾಳುತಿತ್ತು. ಆ ಹಸುರು ಹೊಂಬಿಸಿಲುಗಳ ಸಮಾಗಮದ ರಮಣೀಯತೆ ಸ್ಥೂಲ ಜಗತ್ತನ್ನು ಭಾವಮಯವನ್ನಾಗಿ ಮಾಡಿ ಅದನ್ನು ಸವಿಗನಸಿನ ಎಲ್ಲೆಯ ವರೆಗೂ ಎಳೆದೊಯ್ದಿತ್ತು. ಹೊರಸು, ಲಾವುಗೆ, ಗಿಳಿ, ಕಾಮಳ್ಳಿ, ಕಾಜಾಣ ಮೊದಲಾದ ಸಾವಿರಾರು ಹಕ್ಕಿಗಳ ಬೈಗು ಹಾಡುಗಳಿಂದ ನೋಟದ ಸೊಂಪಿಗೆ ಇಂಪುಗೂಡಿ ನಮ್ಮ ತಿರುಗಾಟ ಸಾರ್ಥಕವಾಗಿತ್ತು.

ಅಂದು ನಾವು ಕೆಲವರು ನಮ್ಮ ಮನೆಗೆ ಎರಡೂವರೆಮೈಲಿ ದೂರ ದಲ್ಲಿರುವ ನಂಟರೊಬ್ಬರ ಮನೆಗೆ ನಂಟರಾಗಿ ಹೋಗಿದ್ದೆವು. ಸಾಯಂಕಾಲ ಆ ಮನೆಯ ಯಜಮಾನರಾದ ಮಂ—ರವರು ನಮ್ಮನ್ನೆಲ್ಲ ತಿರುಗಾಟಕ್ಕೆ ಕರೆದೊಯ್ದರು. ಆ ರೀತಿಯ ತಿರುಗಾಟ ಅವರಿಗೆ ಸ್ವಾಭಾವಿಕವಲ್ಲ. ಆದರೂ ನನಗೆ ಅದರಲ್ಲಿ ಇಷ್ಟವೆಂದು ತಿಳಿದು ಅವರು ಹಾಗೆ ಮಾಡಿದ ರೆಂದು ಊಹಿಸುತ್ತೇನೆ. ಅಂತೂ ಮಿತ್ರರ ಸರಸವಾಕ್ಯಗಳೂ ವಿನೋದ ಗಳೂ ಹಾಸ್ಯಪರಿಹಾಸ್ಯಗಳೂ ಸುತ್ತಣ ಪ್ರಕೃತಿಸೌಂದರ್ಯದಂತೆಯೇ ಆಹ್ಲಾದಕರವಾಗಿದ್ದುವು.

ನಾವು ಸಂಚಾರ ಹೊರಟ ಸ್ಥಳ ಒಂದು ಬೆಟ್ಟದೋರೆ. ದೊಡ್ಡ ದೊಡ್ಡ ಮರಗಳು ಅಲ್ಲಲ್ಲಿ ಬೆಳೆದಿದ್ದರೂ ಕೆಲವೆಡೆ ಸಣ್ಣ ಪೊದರು ಕುರುಚಲು ಗಿಡಗಳಿಂದ ಬಯಲು ಬಯಲಾದಂತಿತ್ತು. ದಾರಿಯಲ್ಲಿ ಹರಟುತ್ತ, ಹಲಕೆಲವು ಸಣ್ಣ ಪುಟ್ಟ ಸಾಹಸಕೃತ್ಯಗಳನ್ನು ಸಾಧಿಸುತ್ತ ಮುಂದುವರಿದೆವು. ಇದ್ದಕ್ಕಿದ್ದಹಾಗೆ ಮಂ–ರವರು ನನ್ನನ್ನು ಕುರಿತು "ಇಲ್ಲೊಂದು ಗಂಟು ಕಿತ್ತ ಸ್ಥಳವಿದೆ. ನೋಡುತ್ತೀರೇನು?" ಎಂದರು. ನಾನು "ಎಲ್ಲಿ, ನೋಡಲೇಬೇಕು" ಎಂದೆ. ಸರಿ, ಎಲ್ಲರೂ ಅಲ್ಲಿಗೆ ಹೊರಟೆವು. ಹೋಗುತ್ತಿರುವಾಗಲೇ ಗಂಟು ಕೀಳುವುದರ ವಿಚಾರವಾಗಿ ಅನೇಕ ಕಥೆಗಳು ಒಬ್ಬೊಬ್ಬರ ಬಾಯಿಂದಲೂ ಹೊರಬಿದ್ದು, ನಾವು ದಾರಿಯಲ್ಲಿ ನಡೆಯುವುದಕ್ಕೆ ಬದಲಾಗಿ ಕಥಾವಾಹಿನಿಯಲ್ಲಿ ತೇಲಿ ಹೋದೆವು.

'ಗಂಟು ಕೀಳುವುದು' ಎಂದರೆ ಏನು ಎಂದು ಕಣ್ಣು ಕಣ್ಣು ಬಿಡಬೇಡಿ. ಅದೊಂದು ನಮ್ಮ ಕಡೆಯ ಪರಿಭಾಷೆ. 'ಗಂಟು' ಎಂದರೆ ನೆಲದಲ್ಲಿ ಹಿಂದಿನವರು ಹೂಳಿಟ್ಟ ಧನ! ಇಂದಿನವರು ಹೂಳಿಟ್ಟರೆ ಅದು 'ಗಂಟು' ಆಗುವುದಿಲ್ಲವೋ ಎಂದು ಕೇಳಬೇಡಿ. ಇಂದಿನವರಾಗಲಿ, ಹಿಂದಿನವರಾಗಲಿ ಧನವನ್ನು ಹೂಳಿದರೆ ಗಂಟು ಗಂಟೇ! ಆದರೆ ಇಂದಿನವರ ಪದ್ಧತಿ ಹೂಳಿಡುವುದಲ್ಲ; ಹೂಳಿದ್ದನ್ನು ಕೀಳುವುದು. ಎಷ್ಟಾದರೂ ಭೂಗರ್ಭಶೋಧನೆಯ ಕಾಲವಷ್ಟೆ! ಅದರಲ್ಲಿಯೂ ಇಂದಿನವರಿಗೆ ಕೂಳಿಡುವುದಕ್ಕೇ ಧನವಿಲ್ಲ; ಹೂಳಿಡುವುದಕ್ಕೆ ಎಲ್ಲಿಂದ ತರಬೇಕು? ಈಗ ಹಣವಿದ್ದವರು ಅದನ್ನು ನೆಲದಲ್ಲಿಡುವುದಿಲ್ಲ, ಕಡಲಾಚೆಗೆ ಕಳುಹಿಸುತ್ತಾರೆ!

ಈಗ ನಿಮಗೆ 'ಗಂಟು' ಎಂದರೆ ಅರ್ಥವಾಯಿತು. ಇನ್ನು 'ಕೀಳುವುದು' ಎಂದರೆ ಏನು? 'ಕೀಳುವುದು' ಎಂದರೆ ಕೀಳುವುದು! ಇದೊಳ್ಳೆಯ ಅರ್ಥ ಹೇಳುವ ರೀತಿ ಎಂದು ನಗಬೇಡಿ. ಅನೇಕ ಸ್ಕೂಲುಗಳಲ್ಲಿ ಕನ್ನಡ ಪದ್ಯಗಳಿಗೆ ಇದಕ್ಕಿಂತಲೂ ಹೆಚ್ಚು ಅರ್ಥ ಹೇಳುತ್ತಾರೆಂದು ತಿಳಿದಿರೇನು? "ಜನಮೇಜಯರಾಯ=ಜನಮೇಜಯರಾಯನೇ, ಕೇಳು=ಕೇಳು" ಎಂದು ಮೊದಲಾಗಿ ಅರ್ಥ ಹೇಳುವುದನ್ನು ವಿದ್ಯಾರ್ಥಿಗಳಾಗಿದ್ದವರೂ ಆಗಿರುವವರೂ ಎಲ್ಲರೂ ಬಲ್ಲರು. ಅಷ್ಟೇ ಅಲ್ಲ; ಕೆಲವುಸಾರಿ

ಅರಗಿಳಿ ಎನ್ನುವುದಕ್ಕೆ ರಾಜಕೀರ ಎಂದೂ, ಬೆಳಕು ಎನ್ನುವುದಕ್ಕೆ ದೀಪ್ತಿ ಎಂದೂ ಅರ್ಥ ಹೇಳುತ್ತಾರೆ. ಕಾರಣವೇನೆಂದರೆ— ಹುಡುಗರ ದಾರಿಗೆ ಇನ್ನೆಲ್ಲಿಯಾದರೂ ದೀಪ್ತಿ, ರಾಜಕೀರಗಳು ಅಡ್ಡಹಾಯ್ದರೆ ಬೆಳಕು ಅರಗಿಳಿಗಳು ಬಂದು ಕಾಪಾಡಲಿ ಎಂದು.

'ಕೀಳುವುದು' ಎಂದರೆ ಕೀಳುವುದು ಎಂದೇನೋ ಹೇಳಿಬಿಟ್ಟೆ. ಆದರೆ ಗಂಟು ಕೀಳುವುದು ಅಷ್ಟು ಸುಲಭವಲ್ಲ ಎಂದು ನಿಮಗೆ ಇನ್ನು ಸ್ವಲ್ಪ ಹೊತ್ತಿನಲ್ಲಿಯೆ ಗೊತ್ತಾಗುತ್ತದೆ. ಗಂಟು ಕೀಳಲು ಹೋಗಿ ಪ್ರಾಣ ಕಳೆದುಕೊಂಡವರಿದ್ದಾರೆ; ಮನೆ ಹಾಳುಮಾಡಿದವರಿದ್ದಾರೆ; ಗಂಟುಕಿತ್ತು ಶ್ರೀಮಂತರಾದವರಿದ್ದಾರೆ, ದರಿದ್ರರಾದವರಿದ್ದಾರೆ. (ಟಿಪ್ಪಣಿ– ಶ್ರೀಮಂತರಾದವರಿಗಿಂತಲೂ ದರಿದ್ರರಾದವರ ಸಂಖ್ಯೆಯೇ ಜಾಸ್ತಿ.) ನಾನು ಟಿಪ್ಪಣಿ ಹಾಕುತ್ತಿರಲಿಲ್ಲ. ಆದರೆ ಟಿಪ್ಪಣಿಗಳು ಎಷ್ಟು ಹೆಚ್ಚಾಗಿದ್ದರೆ ಲೇಖನವೂ ಅಷ್ಟಷ್ಟು ಮಟ್ಟಿಗೆ ಹೆಚ್ಚು ಪ್ರೌಢವಾಗುತ್ತದೆ ಎಂದು ಅನೇಕ ವಿದ್ವಾಂಸರ ನಂಬಿಕೆಯಾಗಿರುವುದರಿಂದ ಹಾಗೆ ಮಾಡ ಬೇಕಾಯಿತು. ಟಿಪ್ಪಣಿಗಳು ಲೇಖನಗಳಿಗೆ ಗಡ್ಡದ ಕೂದಲುಗಳಿದ್ದಂತೆ. ಗಡ್ಡವಿಲ್ಲದ ಗಂಡಸಿಗೆ ಅಷ್ಟು ಗೌರವವಿಲ್ಲ ಎಂದು ಅನೇಕರ ಅನುಭವಕ್ಕೆ ಬಂದಿರಬಹುದು. ಗಡ್ಡ ಬಿಟ್ಟಿದ್ದರೆ ಶ್ರೀಮದ್ಗಾಂಭೀರ್ಯ! ಗಡ್ಡ ಎಷ್ಟು ಉದ್ದವಾಗಿದ್ದರೆ ಅಷ್ಟು ಗಾಂಭೀರ್ಯ! ಕೆಲವು ಪ್ರಸಿದ್ಧ ವ್ಯಕ್ತಿಗಳಂತೂ ಗಡ್ಡದಮೇಲೆಯೇ ನಿಂತಿದ್ದಾರೆ! ಗಡ್ಡದಮೇಲೆಯೇ ನಡೆಯುತ್ತಿದ್ದಾರೆ! ಅವರೆಲ್ಲಿಯಾದರೂ ಗಡ್ಡ ತೆಗೆದುಬಿಟ್ಟರೆ! ದೇವರೇ ಗತಿ! ಲೇಖನಗಳಿಗೂ ಹಾಗೆಯೇ ಟಿಪ್ಪಣಿಗಳು ಉದ್ದವಾಗಿದ್ದು ಹೆಚ್ಚಾಗಿದ್ದರೆ ಅವುಗಳಿಗೆ ಪ್ರೌಢಿಮೆ ದೊರೆಕೊಳ್ಳುವುದರಲ್ಲಿ ಲೇಶವೂ ಸಂದೇಹವಿಲ್ಲ.

ನಾವೆಲ್ಲರೂ ಗಂಟು ಕಿತ್ತಿದ್ದ ಸ್ಥಳವನ್ನು ನೋಡಲು ಉತ್ಸುಕತೆ ಯಿಂದ ಬೇಗಬೇಗನೆ ಸಾಗಿದೆವು. ಹೋಗುತ್ತ ಹೋಗುತ್ತ ಕಾಡು ದಟ್ಟವಾಗತೊಡಗಿತು. ಒಂದು ಹಳ್ಳಿಯ ಕೊರಕಲು ಕೊರಕಲಾದ ಗಾಡಿದಾರಿಯನ್ನು ದಾಟಿದೆವು. ಮಂ– ರವರು ದೂರದ ಒಂದು ಕಾಡು ಮರವನ್ನು ನಿರ್ದೇಶಿಸಿ "ಅದರ ಬುಡದಲ್ಲಿಯೇ!" ಎಂದರು. ನಾವೆಲ್ಲರೂ ಮತ್ತಷ್ಟು ವೇಗವಾಗಿ ನಡೆದೆವು.

" ಇಲ್ಲಿ ನೋಡಿ ! ಇಲ್ಲಿ! " ಎಂದರು.

" ಓ ಹೋ ಹೋ ಹೋ ಹೋ ! " ಎಂದು ಹತ್ತಾರು ಕೊರಳುಗಳು ಕೂಗಿಕೊಂಡವು.

ನಾವು ನಿಂತಲ್ಲಿದ್ದ ಒಂದು ದೊಡ್ಡಮರದ ಬುಡದಲ್ಲಿ ಸುಮಾರು ಎರಡಾಳು ಎತ್ತರಕ್ಕೆ ಒಂದೂವರೆ ಅಥವಾ ಎರಡು ಮಾರು ಅಗಲಕ್ಕೆ ಒಂದು ದೊಡ್ಡ ಗುಣಿಯಾಗಿತ್ತು. ಅದರ ಅಂಚಿನಲ್ಲಿ ಕೆಮ್ಮಣ್ಣು ರಾಶಿ ರಾಶಿಯಾಗಿ ಬಿದ್ದು ಸುತ್ತಮುತ್ತಲಿದ್ದ ಹಸುರಿನ ಮಧ್ಯೆ ಭೂತಕ್ಕೆ ಬಲಿಯಿಟ್ಟ ಕೆಂಗೂಳೋ ಎಂಬಂತೆ ತೋರುತ್ತಿತ್ತು.

" ಏನ್ರೀ, ಇನ್ನೊಂದು ಸ್ವಲ್ಪ ಕೆಲಸಮಾಡಿದ್ದರೆ ಇಲ್ಲೊಂದು ಸೇದುವ ಬಾವಿಯೇ ಆಗುತ್ತಿತ್ತಲ್ಲಾ ! "

" ಏನು, ದೆವ್ವಗಳಿಗೆ ನೀರು ಕುಡಿಯುವುದಕ್ಕೇನು ? "

" ಅಲ್ರೀ, ಎಷ್ಟು ಜನ ಎಷ್ಟು ದಿವಸ ಅಗೆದರು ಇಲ್ಲಿ ? "

" ಮನೆಯಿಂದ ಬುತ್ತಿ ಕಟ್ಟಕೊಂಡು ಬಂದು ರಾತ್ರಿ ಹಗಲು ಅಗೆದಿದ್ದಾರೆ ಅಂದ್ರೆ ! "

" ಏನಾದರೂ ಸಿಕ್ಕಿತೋ ? "

" ಎಂಥದು ಸಿಕ್ಕಿದ್ದು ? ಕೆಮ್ಮಣ್ಣು ! "

" ಅಲ್ರೀ, ಇಲ್ಲಿ ಗಂಟಿದೆ ಎಂದು ಅವರಿಗೆ ಯಾರು ಹೇಳಿದ್ದು ? "

" ಯಾರು ಹೇಳ್ತಾರೆ ? ಈ ಮರ. "

ನಾನು ಸ್ವಲ್ಪ ಬೆರಗಾಗಿ ಆ ಮರದಕಡೆ ನೋಡಿದೆ. ಮಂ–ರವರು ನನ್ನ ಮುಖವನ್ನು ನೋಡಿ ನಕ್ಕು ವಿವರಿಸತೊಡಗಿದರು.

" ಈ ಮರದಲ್ಲಿ ಒಂದು ಕೈ ಬಂದಿತ್ತು. ಅದನ್ನು ಕಡಿದಿದ್ದಾರೆ. ನೋಡಿ, ಗುರುತು ಕಾಣುತ್ತದೆ. ಮರದಲ್ಲಿ ಕೈ ಬಂದರಾಗಲಿ, ಚಿಟ್ಟೆ ಗಿಡದಲ್ಲಿ ಬಂದಿಳಿಕೆ ಬಂದರಾಗಲಿ ಅಲ್ಲಿ ಗಂಟು ಇರುವುದಕ್ಕೆ ಗುರುತಂತೆ. ಮರದ ಬುಡಕ್ಕೂ ಕೈ ಬಂದ ಸ್ಥಳಕ್ಕೂ ಎಷ್ಟು ದೂರವಿರುವುದೋ ಅಷ್ಟು ಆಳದಲ್ಲಿ ನೆಲದೊಳಗೆ ಗಂಟು ಇರುತ್ತದೆ ಎಂದು ಲೆಕ್ಕ. . . . "

ಮರಕ್ಕೆ ಕೈ ಬರುವುದೆಂದರೆ, ಬೇರಿನ ರೂಪದ ಕೊಂಬೆಯೊಂದು (ಅದರಲ್ಲಿ ಎಲೆಗಳಿರುವುದಿಲ್ಲ) ಮರದ ಮೈಯಿಂದ ಮೂಡಿ ನೆಲದ ಕಡೆಗೆ

ಮುಖ ಹಾಕುತ್ತದೆ, ಕೈಮರವು ದಾರಿಯನ್ನು ನಿರ್ದೇಶಿಸುವಂತೆ. ಆದ್ದರಿಂದಲೇ ಅದಕ್ಕೆ ಮರದ ಕೈ ಎಂದು ಹೆಸರು. ಮರಗಳಿಗೆ ಅಂತಹ ಕೈ ಬರುವುದು ಬಹಳ ಅಪೂರ್ವವಾದುದರಿಂದ ಹಳ್ಳಿಯ ಜನಗಳು ಅದಕ್ಕೊಂದು ವಿಶೇಷಾರ್ಥಕಲ್ಪನೆ ಮಾಡಿ, ಆ ಕೈ ಗುಪ್ತ ಧನವಿದೆಯೆಂದು ಮರ ಮಾಡುವ ಸನ್ನೆ ಎಂದು ಭಾವಿಸಿ ನೆಲವನ್ನು ಅಗೆಯುತ್ತಾರೆ. ಅಗೆಯುವಾಗ ಭೂತ ಪಿಶಾಚಿಗಳಿಗೆ ರಕ್ತದ ಬಲಿ ಕೊಡುತ್ತಾರೆ. ಮಂತ್ರವಾದಿಗಳಿಗೆ ಹಣವನ್ನು ಕೊಡುತ್ತಾರೆ. ಯಥೇಚ್ಛವಾಗಿ ಧನ ಲಭಿಸಲಿರುವಾಗ ಸ್ವಲ್ಪ ರೂಪಾಯಿ ವೆಚ್ಚವಾದರೇನಂತೆ! ಪ್ರಯತ್ನ ವಿಫಲವಾಗಿ ಆಶಾಭಂಗವಾದರೆ (ಹಾಗಲ್ಲದೆ ಮತ್ತೇನು?) ಏನೋ ನಮಗೆ ಅದೃಷ್ಟವಿರಲಿಲ್ಲ, ಗಂಟು ಮಾಯವಾಗಿರಬೇಕು ಎಂದು ಸಮಾಧಾನಮಾಡಿಕೊಳ್ಳುತ್ತಾರೆಯೇ ಹೊರತು, ಅಲ್ಲಿ ಗಂಟಿರಲಿಲ್ಲ ನಾವು ಮಾಡಿದ್ದು ಮೂರ್ಖತನ ಎಂದು ಒಪ್ಪಿಕೊಳ್ಳುವುದೇ ಇಲ್ಲ. ಈ ಗಂಟು ಕೀಳುವ ಸಾಹಸ ಬಹು ಪುರಾತನಕಾಲದಿಂದಲೂ ನಡೆದುಬಂದಿದೆ. ಈಗಲೂ ನಡೆಯುತ್ತಿದೆ. ಆದರೂ ಜನರು ಕಣ್ದೆರೆದಿಲ್ಲ; ನಂಬಿಕೆ ತಪ್ಪಿಲ್ಲ. ಬಹುಶಃ ಹಿಂದೆ ಯಾರಿಗೋ ಎಲ್ಲಿಯೋ ಆಕಸ್ಮಿಕವಾಗಿ ಧನ ಲಭಿಸಿರಬೇಕೆಂದು ತೋರುತ್ತದೆ. ಸಫಲವಾದ ಒಂದು ಪ್ರಯತ್ನವನ್ನೇ ಪ್ರಮಾಣವಾಗಿಟ್ಟುಕೊಂಡು ವಿಫಲವಾದ ನೂರು ಪ್ರಯತ್ನಗಳನ್ನು ಜನರು ಲಕ್ಷಿಸುವುದೇ ಇಲ್ಲ. ಅದೂ ಅಲ್ಲದೆ ಮನುಷ್ಯನಿಗೆ ಸ್ವಾಭಾವಿಕವಾಗಿಯೇ ಸಾಹಸದಲ್ಲಿ ಕುತೂಹಲವಿರುತ್ತದೆ. ಪುರಾಣ ಇತಿಹಾಸಗಳಲ್ಲಿ ಈ ಗಂಟು ಕೀಳುವ ಪ್ರಯತ್ನದಂತಹ ಸಾಹಸಗಳು ಎಷ್ಟು ಜರುಗಿಲ್ಲ! ಪುರಾಣ ಇತಿಹಾಸಗಳಂತಹ ಕಲ್ಪನಾ ಪ್ರಪಂಚದಲ್ಲಿ ಸಾಧ್ಯವಾಗುವ ಕಾರ್ಯಗಳು ವಾಸ್ತವಜಗತ್ತಿನಲ್ಲಿ ಸಾಧ್ಯವಲ್ಲ ಎಂಬುದು ಹಳ್ಳಿಯವರಿಗೆ ಹೇಗೆ ಗೊತ್ತಾಗಬೇಕು? ಆದ್ದರಿಂದಲೇ ಮರಕ್ಕೆ ಕೈ ಬಂದಿತೆಂದರೆ ವೈಗಳ್ಳನೂ ಕೂಡ ಹಾರೆ ಗುದ್ದಲಿ ತೆಗೆದುಕೊಂಡು ಹಗಲಿರುಳೂ ವೈಮುರಿಯುವಂತೆ ಅಗೆಯುತ್ತಾನೆ. ಅದೃಷ್ಟ, ಅನಿರ್ದಿಷ್ಟ, ಆಕಸ್ಮಿಕ, ಅಪ್ರಮೇಯ, ಅನಿರ್ವಚನೀಯ — ಇವುಗಳು ಇಲ್ಲದಿದ್ದರೆ ಮನುಷ್ಯನ ಬಾಳು ಎಷ್ಟು ನೀರಸವಾಗುತ್ತಿತ್ತು! ಎಷ್ಟು ಬೇಗನೆ ಬೇಸರವಾಗುತ್ತಿತ್ತು.

ಗಂಟು ಕಿತ್ತಿದ್ದ ಸ್ಥಳವನ್ನು ನೋಡಿಕೊಂಡು ಮನೆಯ ಕಡೆಗೆ ತಿರುಗಿದೆವು. ಆಗಲೇ ಬೈಗುಗಪ್ಪು ಮುಸುಗುತಿತ್ತು. ದಾರಿಯಲ್ಲಿ ಮ್ಂ–ರವರೂ ಇತರರೂ ಗಂಟು ಕೀಳುವ ಸಾಹಸಗಳನ್ನು ಕುರಿತು ಅನೇಕ ಕಥೆ ಹೇಳಿದರು. ಒಬ್ಬನು ಗಂಟು ಕೀಳುವ ಗಡಿಬಿಡಿಯಲ್ಲಿ ಹುತ್ತವನ್ನಗೆದು ನಾಗರ ಹಾವಿನ ವಿಷದಿಂದ ಮಡಿದನಂತೆ. ರಸ್ತೆ ಕೆಲಸಮಾಡುತ್ತಿದ್ದ ಕೆಲವು ಮಂದಿ ಕ್ರೈಸ್ತ ಕೂಲಿಯಾಳುಗಳು ದಾರಿಯ ಬಳಿಯಿದ್ದ ಒಂದು ಬಂಡೆಯ ಅಡಿಯಲ್ಲಿ ದೊಡ್ಡದೊಂದು ಕೊಪ್ಪರಿಗೆಯ ತುಂಬ ಹಣವಿದೆ ಎಂಬ ಐತಿಹ್ಯಕ್ಕೆ ಮರುಳಾಗಿ ಮಾಡುವ ಕೆಲಸವನ್ನು ಬಿಟ್ಟು ಆ ಬಂಡೆಯನ್ನು ಬಹು ಪ್ರಯಾಸದಿಂದ ಕಿತ್ತು ತೆರೆದು ನೋಡುವಲ್ಲಿ ಮಣ್ಣು ಎರೆಯಹುಳುಗಳಲ್ಲದೆ ಬೇರೆಯೇನೂ ಇರಲಿಲ್ಲವಂತೆ! ನಿಜವಾಗಿಯೂ ಇರಲಿಲ್ಲ ಎಂದರ್ಥವಲ್ಲ. ಇದ್ದರೂ ಕೂಡ ಕ್ರೈಸ್ತರು ಬಲಿಗಿಲಿ ಕೊಟ್ಟು ಹಿಂದೂ ದೇವತೆಗಳನ್ನು ಒಲಿಸಿಕೊಳ್ಳದಿದ್ದುದರಿಂದ ಇದ್ದ ಗಂಟು ಮಾಯವಾಗಿಬಿಟ್ಟಿತಂತೆ! ಹಿಂದೆ ಒಂದುಸಾರಿ ಗಂಟು ಕೀಳುವ ಸಲುವಾಗಿ ಕೆಲವು ಜನ ಧೂರ್ತರು ಮಂತ್ರವಾದಿಯ ಸಲಹೆಯಂತೆ ಕನ್ನಡ ಜಿಲ್ಲೆಯಿಂದ ಘಟ್ಟದಮೇಲೆ ಕೆಲಸಕ್ಕೆ ಬಂದ ಒಬ್ಬ ಕೂಲಿ ಹುಡುಗನನ್ನೇ ಬಲಿಕೊಡಲು ಪ್ರಯತ್ನಮಾಡಿದ್ದರಂತೆ!

ಇಂತಹ ಅನೇಕ ಸಂಗತಿಗಳನ್ನು ವಿಸ್ತಾರವಾಗಿ ಸ್ವಾರಸ್ಯವಾಗಿ ಅಭಿನಯಪೂರ್ವಕವಾಗಿ ಹೇಳಿದರು. ಅದರಲ್ಲಿ ಒಂದನ್ನು ನಿಮಗಿಲ್ಲಿ ವಿಸ್ತಾರವಾಗಿ ಹೇಳುತ್ತೇನೆ. ಏಕೆ? ಗಡಿಯಾರದ ಕಡೆ ನೋಡುತ್ತೀರಿ! ಹೊತ್ತಾಯಿತೆ? ಅಥವಾ ಬೇಸರವಾಯಿತೇ? ಇರಲಿ, ಸ್ವಲ್ಪ ಕೇಳಿಬಿಡಿ. ಪ್ರಾರಂಭಮಾಡಿದ್ದಾಯಿತು. ಹೇಳಿ ಮುಗಿಸಿಬಿಡುತ್ತೇನೆ.

ಮೊಸರೂರು ಮಂಜಣ್ಣ ಒಬ್ಬ ಜಮೀನುದಾರರ ಒಕ್ಕಲು. ಅವನಿಗೆ ಇದ್ದಕ್ಕಿದ್ದಹಾಗೆ ಶ್ರೀಮಂತನಾಗಬೇಕೆಂಬ ಹುಚ್ಚುಹಿಡಿಯಿತು. ಹೆಚ್ಚು ಗದ್ದೆ ಸಾಗುವಳಿ ಮಾಡತೊಡಗಿದನು. ಒಂದು ಸಣ್ಣ ಅಡಕೆತೋಟವನ್ನು ಗುತ್ತಿಗೆಗೆ ತೆಗೆದುಕೊಂಡನು. ದೂರದ ಹಳ್ಳಿಯ ಜಾನುವಾರುಗಳು ತನ್ನ ಗದ್ದೆ ತೋಟಗಳಿಗೆ ಬಂದಾಗ ಅವುಗಳನ್ನು ಹಿಡಿದು, ಕಿವಿ ಬಾಲಗಳನ್ನು ಕೊಯ್ದು, ಚಹರೆ ತಪ್ಪಿಸಿ, ತನ್ನ ಕೊಟ್ಟಿಗೆಗೆ ಕೂಡಿಕೊಂಡನು.

ನೆರೆಯವರ ಗದ್ದೆಗಳಿಂದ ಹಾರೆ ಗುದ್ದಲಿ ಮೊದಲಾದ ಹತಾರುಗಳನ್ನು ಕದ್ದು ತಂದನು. 'ಕಾಸಿಗೆ ಕಾಸು ಗಂಟುಹಾಕಿ, ಹೊಟ್ಟೆಗೆ ಬೆನ್ನು ಅಂಟು ಹಾಕಿ' ಅಂತೂ ಸ್ವಲ್ಪ ದುಡ್ಡು ಮಾಡಿಕೊಂಡನು. ಸಗಣಿ ಕೆಸರು ಹಿಡಿದು ಜಿಡ್ಡು ಜಿಡ್ಡಾದ ಅಂಗಿ 'ಪಂಚೆ' ಟೋಪಿಗಳನ್ನೇ ಹರಿದು ಚಿಂದಿಚಿಂದಿಯಾಗುವವರೆಗೂ ಉಡತೊಡಗಿದನು. ಹೆಂಡತಿಗೆ 'ಮಿತವ್ಯಯ' ವನ್ನು ಕಲಿಸತೊಡಗಿದನು. ಆದರೆ ಅದು ಸಾಗಲಿಲ್ಲ. ಆಕೆಯ ಕಾಟ ಸಹಿಸಲಾರದೆ ಕೆಲವು ಆಭರಣಗಳನ್ನೇನೋ ಮಾಡಿಸಿಕೊಟ್ಟನು. ಹೀಗಾಗಿ ಕೆಲವು ವರುಷಗಳಲ್ಲಿಯೇ ನಿರಂತರ ಶ್ರಮಯಾತನೆಗಳಿಂದ ಮೊಸರೂರು ಮಂಜಣ್ಣನು ಮೊಸರೂರು ಮಂಜಣ್ಣಗೌಡರಾದನು. ಅನೇಕರು ಅವನನ್ನು ಮಂಜಣ್ಣಗೌಡರೇ ಎಂದು ಕರೆಯಲಾರಂಭಿಸಿದರು. ಮಂಜಣ್ಣನಿಗೆ ಪಿತ್ತ ನೆತ್ತಿಗೇರಿ ಇನ್ನೂ ಹೆಚ್ಚಾಗಿ ಐಶ್ವರ್ಯ ಸಂಪಾದನೆಮಾಡಬೇಕೆಂದು ಕಾತರನಾದನು. ಮಾರ್ಗ? ಮಂಜಣ್ಣ ಹಗಲಿರುಳು ಐಶ್ವರ್ಯ-ಸಂಪಾದನೆಮಾಡುವ ಚಿಂತೆಗೊಳಗಾಗಿ ಭೂತಗಳಿಗೂ ದೇವತೆಗಳಿಗೂ ವಿಧವಿಧವಾದ ಕಾಣಿಕೆ ಕಟ್ಟಿ ಪ್ರಾರ್ಥಿಸುತ್ತಿದ್ದನು. ಪುರಾಣ ಭಾಗವತ ರಾಟಗಳಲ್ಲಿ ಆಕಸ್ಮಿಕವಾದ ಈಶ್ವರಕೃಪೆಯಿಂದ ಸಂಪತ್ತು ಲಭಿಸುತ್ತದೆ ಎಂಬುದನ್ನು ಕೇಳಿ ನಂಬಿದ್ದ ಆತನು ಯಾವುದಾದರೊಂದು ಅದ್ಭುತ ರೀತಿಯಿಂದ ತಾನು ಶ್ರೀಮಂತನಾಗುತ್ತೇನೆ ಎಂದು ದಿನದಿನವೂ ಆ ಮಹಾಮುಹೂರ್ತವನ್ನೇ ನಿರೀಕ್ಷಿಸತೊಡಗಿದನು.

ಅಘಟನಘಟನಾಕಾರಿಯಾದ ದೇವರ ಕೃಪೆಯಿಂದ ತನ್ನ ಪೆಟ್ಟಿಗೆಯಲ್ಲಿದ್ದ ರೂಪಾಯಿಗಳು ಮರಿಹಾಕಬಹುದೆಂದು ದಿನವೂ ಅವುಗಳನ್ನು ಎಣಿಸಿ ಎಣಿಸಿ ನೋಡಿದನು. ರೊಕ್ಕ ಚೊಕ್ಕವಾದುವೇ ಹೊರತು ಲೆಕ್ಕ ಹೆಚ್ಚಾಗಲಿಲ್ಲ. ಯಾವುದಾದರೂ ಒಂದು ದೇವತೆ ತನ್ನ ಭಕ್ತಿಗೆ ಮೆಚ್ಚಿ ಹಣದ ಗಂಟನ್ನು ಕಂಡು ತನ್ನ ಮನೆಯೊಳಗೆ ಹಾಕಬಹುದೆಂದು ದಿನದಿನವೂ ಮನೆಯ ಮೂಲೆ ಮೂಲೆಗಳನ್ನು ಹುಡುಕಿ ನೋಡಿದನು. ಕಸಕಡ್ಡಿ ಕ್ರಿಮಿಕೀಟಗಳು ಕಾಣುತ್ತಿದ್ದುವೇ ಹೊರತು ಗಂಟು ಕಾಣಿಸಲಿಲ್ಲ. ನೆಲದಲ್ಲಿ ಎಲ್ಲಿಯಾದರೂ ಗಂಟುದೊರಕಬಹುದೆಂದು ಭಾವಿಸಿ ನಡೆಯುವಾಗ ಧಪ್ಪಧಪ್ಪನೆ ಕಾಲು ಹಾಕಿ ಹಣದ ಸದ್ದಾಗುವುದೋ ಎಂದು

ಅಲಿಸಿ ನೋಡಿದನು. ಪರಿಣಾಮವಾಗಿ ಕಾಲುಕೀಲುಗಳು ನೊಂದು ಸ್ವಲ್ಪ ನರಳಿದನೇ ಹೊರತು ಎಲ್ಲಿಯೂ ಗುಪ್ತ ಧನವಿಟ್ಟ ತಾಣ ಸಿಕ್ಕಲಿಲ್ಲ.

ಹೀಗಿರಲು ಒಂದುದಿನ ಮಂಜಣ್ಣ ತನ್ನ ತೋಟದಲ್ಲಿ ಸಂಚರಿಸುತ್ತಿದ್ದಾಗ ಅಲ್ಲಿದ್ದ ಒಂದು ಹಲಸಿನ ಮರದಲ್ಲಿ ಒಂದು ಕೈಮೂಡಿದ್ದನ್ನು ಕಂಡನು. ಲಕ್ಷ್ಮೀಸಮೇತನಾದ ಶ್ರೀಮನ್ನಾರಾಯಣನೇ ಪ್ರತ್ಯಕ್ಷವಾಗಿದ್ದರೂ ಮಂಜಣ್ಣನಿಗೆ ಅಷ್ಟು ಆನಂದವಾಗುತ್ತಿತ್ತೋ ಇಲ್ಲವೋ! ತನ್ನ ಅದೃಷ್ಟ ಕುಲಾಯಿಸಿತೆಂದು ಹಿಗ್ಗಿ ಹೆಬ್ಬಾಗಿಲಾದನು. ಆ ಮರಕ್ಕೆ ಸಾಷ್ಟಾಂಗ ನಮಸ್ಕಾರಮಾಡಿ, ಆ ತೋಟದ ಭೂತನಿಗೆ ಹತ್ತಾರು ಕೋಳಿಗಳನ್ನು ಹೆಚ್ಚಾಗಿ ಹರಕೆ ಕೊಡುವುದಾಗಿ ಹೇಳಿಕೊಂಡು, ಮನೆಗೆ ಬಂದನು. ಗುಟ್ಟನ್ನು ಯಾರಿಗೂ ಹೇಳಲಿಲ್ಲ. ಹೆಂಡತಿಗೆ ಹೇಳಿದರೂ ಕೂಡ ಸುದ್ದಿ ಬಯಲಾಗುತ್ತದೆಂದು ಭಯ. ತಾನೊಬ್ಬನೇ ಗಂಟು ಕೀಳಬೇಕೆಂದು ನಿಶ್ಚಯಿಸಿದನು.

ಆದರೆ ಮಂಜಣ್ಣನಿಗೆ ಐಶ್ವರ್ಯದಲ್ಲಿ ಆಸೆ ಇದ್ದುದಕ್ಕಿಂತಲೂ ಹೆಚ್ಚಾಗಿ ಭೂತಪಿಶಾಚಿಗಳಲ್ಲಿ ನಂಬಿಕೆಯೂ ಭಯವೂ ಇದ್ದುವು. ಸರಿಯಾದ ಮಂತ್ರವಾದಿಗಳ ಸಹಾಯವಿಲ್ಲದೆ, ಭೂತಗಳಿಗೆ ತೃಪ್ತಿಯಾಗುವಂತೆ ಬಲಿಕೊಟ್ಟು ದಿಗ್ಬಂಧನಮಾಡದೆ ಗಂಟು ಕಿತ್ತರೆ ಚಿತ್ರವಿಚಿತ್ರ ಹಿಂಸೆಗಳಿಂದ ಪ್ರಾಣಹೋಗುತ್ತದೆಂದು ಆತನು ಕೇಳಿದ್ದನು. ದೆವ್ವಗಳನ್ನು ಲಕ್ಷಿಸದೆ ಗಂಟು ಕಿತ್ತ ಒಬ್ಬನು ಅದೇ ಮರಕ್ಕೆ ನೇಣಾಗಿದ್ದನಂತೆ. ಇನ್ನೊಬ್ಬನು ರಕ್ತಕಾರಿ ಸತ್ತನಂತೆ. ಮತ್ತೊಬ್ಬನಿಗೆ ಹುಚ್ಚುಹಿಡಿಯಿತಂತೆ. ಮಗುದೊಬ್ಬನು ತನ್ನ ಆಹಾರದಲ್ಲಿ ಸದಾ ಕ್ರಿಮಿಕೀಟಾದಿ ಅಸಹ್ಯಗಳನ್ನೇ ಕಾಣತೊಡಗಿದನಂತೆ. ಇದನ್ನೆಲ್ಲಾ ಕೇಳಿದ್ದ ಅವನು ತಾನೊಬ್ಬನೇ ಗಂಟು ಕೀಳಲು ಸಾಹಸಮಾಡಲಿಲ್ಲ. ಯಾರಾದರೂ ಒಬ್ಬ ಮಂತ್ರವಾದಿ ತನ್ನೂರಿಗೆ ಬರುವುದನ್ನೇ ನಿರೀಕ್ಷಿಸುತ್ತಿದ್ದನು.

ಈ ಮಧ್ಯೆ ಮಂಜಣ್ಣ ಸ್ವಲ್ಪ ಧಾರಾಳವಾಗಿ ವೆಚ್ಚಮಾಡತೊಡಗಿದನು. ಏಕೆಂದರೆ, ತೋಟದಲ್ಲಿ ಹಲಸಿನಮರದ ಬುಡದಲ್ಲಿ ಬ್ಯಾಂಕು ಇದೆಯಷ್ಟೆ! ಇನ್ನೇಕೆ ಕಾರ್ಪಣ್ಯ! ಭೂತ ಪಿಶಾಚಿಗಳಿಗೂ ಹೆಚ್ಚು ಹೆಚ್ಚಾಗಿ ಕೋಳಿ ಕುರಿಗಳನ್ನು ಬಲಿಕೊಡತೊಡಗಿದನು. ಪ್ರತಿ

ದಿನವೂ ತೋಟದ ಹಲಸಿನ ಮರದ ಬುಡದಲ್ಲಿ ಕುಳಿತು ಹೊಂಗನಸುಗಳನ್ನು ನಿರ್ಮಿಸಿ ಆನಂದಪಡುವನು. ಮಂತ್ರವಾದಿಯ ಆಗಮನಕ್ಕಾಗಿ ಪ್ರಾರ್ಥಿಸುವನು.

ಹೀಗಿರುತ್ತಿರಲು ಮಂಜಣ್ಣನ ಕಿವಿಗೆ ಒಂದು ಸುದ್ದಿ ಬಿದ್ದಿತು: ನೆರೆಯೂರಿನಲ್ಲಿ ಅದ್ಭುತ ಶಕ್ತಿಯುಳ್ಳ ಬೈರಾಗಿಯೊಬ್ಬನು ಬಂದಿದ್ದಾನೆ ಎಂದು.

ಆ ಬೈರಾಗಿ ಹಳ್ಳಿಗೆ ಮೊದಲು ಬಂದಾಗ ಅವನಿಗೆ ಗೌರವ ವಾಗಲಿ, ಆಹಾರ ಭೋಗಸಾಮಗ್ರಿಗಳಾಗಲಿ ದೊರಕಲಿಲ್ಲ. ಅವನು ಕೋಪಗೊಂಡು 'ನಿಮ್ಮ ದನಕರುಗಳೆಲ್ಲ ನಾಶವಾಗುವಂತೆ ಶಾಪ ಕೊಡುತ್ತೇನೆ' ಎಂದು ಗದರಿಸಿದನು. ಹಳ್ಳಿಯವರು ಅದನ್ನು ಅಷ್ಟು ಗಮನಕ್ಕೆ ತರಲಿಲ್ಲ. ಕೆಲ ದಿನಗಳಲ್ಲಿಯೇ ಮೇಯಲು ಹೋಗಿದ್ದ ದನಗಳು ಒಂದೊಂದಾಗಿ ಸಾಯತೊಡಗಿದುವು. ಕಾರಣ ಗೊತ್ತಾಗಲಿಲ್ಲ. ರೋಗಕ್ಕೆ ಯಾವ ಮದ್ದೂ ಮುಟ್ಟಲಿಲ್ಲ. ಹತ್ತಿಪ್ಪತ್ತು ಕಾಲ್ನಡೆಗಳು ಗತಿಸಿದಮೇಲೆ ಬೈರಾಗಿಯ ಶಾಪವೇ ದನಗಳ ಸಾವಿಗೆ ಕಾರಣವಾಗಿರ ಬೇಕೆಂದು ನಿರ್ಧರಿಸಿ ಹಳ್ಳಿಯ ಜನರು ಆತನೆಡೆಗೆ ಹೋಗಿ ಕ್ಷಮೆ ಬೇಡಿದರು. ಬೇಕುಬೇಕಾದಂತೆ ಹಣ್ಣುಹಂಪಲು ಹಾಲು ಹಣ ಎಲ್ಲವನ್ನೂ ಕಾಣಿಕೆಯೊಪ್ಪಿಸಿದರು. ಬೈರಾಗಿ ಒಬ್ಬೊಬ್ಬರಿಗೂ ಸ್ವಲ್ಪ ಸ್ವಲ್ಪ ಬೂದಿಯನ್ನು ಮಂತ್ರಿಸಿಕೊಟ್ಟು ಅಭಯದಾನಮಾಡಿದನು. ತರುವಾಯ ದನಗಳು ಸಾಯಲಿಲ್ಲ. ಬೈರಾಗಿಯ ಮಾಹಾತ್ಮ್ಯ ಹೆಚ್ಚಿ ಜನಗಳು ರೋಗರುಜಿನಗಳಿಗೂ ಕಷ್ಟಸಂಕಟಗಳಿಗೂ ಬೈರಾಗಿಯ 'ಈಬೂತಿ' ಪ್ರಸಾದವೇ ಮದ್ದೆಂದು ಭಾವಿಸಿ ಗುಂಪುಗುಂಪಾಗಿ ನೆರೆಯ ತೊಡಗಿದರು.

ಆದರೆ ನಡೆದ ಸಂಗತಿ ಬೇರೆಯಾಗಿತ್ತು. ದನಗಳ ಸಾವಿಗೆ ಬೈರಾಗಿಯ ಕೋಪ ಕಾರಣವಾಗಿದ್ದರೂ ಶಾಪ ಎಷ್ಟು ಮಾತ್ರವೂ ಕಾರಣವಾಗಿರಲಿಲ್ಲ. ಹಳ್ಳಿಯವರನ್ನು ಭಯಗೊಳಿಸಲೋಸುಗವೂ ಶಿಕ್ಷಿಸಲೋಸುಗವೂ ಅವನು ದನಗಳು ಮೇಯುವ ಬಯಲಿನಲ್ಲಿ ತನ್ನಲ್ಲಿದ್ದ ವಿಷದ ಹುಡಿಯನ್ನು ಚೆಲ್ಲುತ್ತಿದ್ದನು. ಮೂಕಪ್ರಾಣಿಗಳು ಹುಲ್ಲಿನೊಡನೆ

ವಿಷವನ್ನು ತಿಂದು ಸಾಯುತ್ತಿದ್ದುವು. ಹಳ್ಳಿಯವರು ಶರಣಾಗತರಾಗಲು ವಿಷಪ್ರಯೋಗ ನಿಂತಿತು; ದನಗಳ ಸಾವೂ ನಿಂತಿತು. ಇದನ್ನು ಕೇಳಿ ನೀವೇನೂ ಆಶ್ಚರ್ಯಪಡಬೇಡಿ. ನಮ್ಮ ದೇಶದ ಸನ್ನೇಸಿ ಬೈರಾಗಿಗಳ ಶಾಪಮಹಿಮೆಗೆ ದೈವಿಕ ಕಾರಣಗಳಿಗಿಂತಲೂ ಇಂತಹ ಭೌತಿಕ ಕಾರಣಗಳೇ ಹೆಚ್ಚು. ನನ್ನ ಮಿತ್ರರೊಬ್ಬರು ಇಂತಹ ತಮ್ಮ ಅನುಭವವನ್ನು ಹೇಳಿದರು. ಅದು ಇನ್ನೂ ಭಯಾನಕವಾದುದು. ಬಂಗಾಳಾ ಪ್ರಾಂತದ ಮೈಮೆನ್‌ಸಿಂಗ್‌ನಲ್ಲಿ ಕೆಲವು ಜನ ಕುಪಿತರಾದ ಫಕೀರರು ರಾತ್ರಿ ಕಾಲದಲ್ಲಿ ಗುಟ್ಟಾಗಿ ಕಾಲರಾ ಕ್ರಿಮಿಗಳನ್ನು ಕೆರೆಬಾವಿಗಳಲ್ಲಿ ಹಾಕಿ ತಮ್ಮ ಶಾಪಮಹಿಮೆಯನ್ನು ಸ್ಥಿರಪಡಿಸಿಕೊಳ್ಳುತ್ತಿದ್ದರಂತೆ. ಸರ್ಕಾರದವರು ರೋಗವನ್ನು ನಿಲ್ಲಿಸಲು ಎಷ್ಟು ಪ್ರಯತ್ನಪಟ್ಟರೂ ನಾಗದೆ ಕಡೆಗೆ ಸ್ವಯಂಸೇವಕನೊಬ್ಬನಿಂದ ಈ ವಿಚಾರವನ್ನು ತಿಳಿದು, ಫಕೀರರು ತಮ್ಮ ಕರಾಳ ಕಾರ್ಯದಲ್ಲಿ ತೊಡಗಿದ್ದಾಗಲೇ ಅವರನ್ನು ದಸ್ತಗಿರಿಮಾಡಿ ಐದೈದು ವರುಷ ಕಠಿಣ ಸಜಾ ವಿಧಿಸಿದರಂತೆ! ಮನುಷ್ಯರನ್ನೇ ಕೊಲ್ಲಲು ಹಿಂಜರಿಯದವರು ಪ್ರಾಣಿಗಳನ್ನು ಕೊಲ್ಲಲು ಹೆದರುತ್ತಾರೆಯೆ?

ಮಂಜಣ್ಣ ಆ ಬೈರಾಗಿಯನ್ನು ಹೋಗಿ ಕಂಡನು. ಗುರುಗಳಿಗೆ ಮಾಡಬೇಕಾದ ಸನ್ಮಾನವನ್ನೂ ನೀಡಬೇಕಾದ ಕಾಣಿಕೆಯನ್ನೂ ನೀಡಿದನು. ಸಿಕ್ಕುಸಿಕ್ಕಾಗಿ ಕೊಳಕಿನ ರಾಶಿಯಂತಿದ್ದ ವಿಕಟಾಕಾರದ ಜಟೆ, ನೀಳವಾಗಿ ಪೈಶಾಚಿಕವಾಗಿದ್ದ ದಾಡಿ, ಮೈತುಂಬ ಬಳಿದುಕೊಂಡಿದ್ದ ಬೂದಿ, ಕಂಕುಳಲ್ಲಿದ್ದ ಯೋಗದಂಡ, ತ್ರಿಶೂಲ, ಹಾರಾಡುತ್ತಿದ್ದ ಪತಾಕೆ, ಗುಡುಗುಡಿ, ಚೀಲದಲ್ಲಿದ್ದ ಮನುಷ್ಯರ ತಲೆಯೋಡು ಮತ್ತು ಎಲುಬುಗಳು— ಇತ್ಯಾದಿಗಳಿಂದ ವಿಭೂಷಿತನಾಗಿದ್ದ ಆ ರುದ್ರವ್ಯಕ್ತಿ ಮಂಜಣ್ಣನಿಗೆ ಯೋಗ್ಯಮಂತ್ರವಾದಿಯಾಗಿ ತೋರಿದನು. ಅವನನ್ನು ಕಂಡರೆ ಎಂತಹ ಭೂತಪಿಶಾಚಿಗಳೂ ಹೆದರುವಂತೆ ತೋರುತ್ತಿತ್ತು! ಮಂಜಣ್ಣ ತನ್ನ ಗುಟ್ಟನ್ನು ಅವನೊಡನೆ ಹೇಳಿ ಹೇಗಾದರೂ ಮಾಡಿ ಆ ಗುಪ್ತ ಧನವನ್ನು ತನ್ನ ಕೈವಶಮಾಡಬೇಕೆಂದು ಕೇಳಿಕೊಂಡನು. ಬೈರಾಗಿಯೂ ಸುಸಮಯ ಸಿಕ್ಕಿತೆಂದು ಒಪ್ಪಿಕೊಂಡನು.

ಇಬ್ಬರೂ ಗುಟ್ಟಾಗಿ ಗೊತ್ತುಮಾಡಿಕೊಂಡ ಒಂದು ಅಮಾವಾಸ್ಯೆಯ

ರಾತ್ರಿ ಸಕಲ ಸಾಮಗ್ರಿಗಳೊಡನೆ ಹಲಸಿನಮರದ ಬುಡವನ್ನು ಸೇರಿದರು. ಬೈರಾಗಿ ನೆಲದಮೇಲೆ ವಿಕಾರಾಕೃತಿಗಳನ್ನು ಬರೆದು ಮಂತ್ರಗಳನ್ನು ಹೇಳಿ, ರಕ್ತವರ್ಣದ ಹೂವುಗಳಿಂದ ಅರ್ಚಿಸಿ, ಕೋಳಿಗಳನ್ನು ಬಲಿ ಕೊಟ್ಟು, ಹೆಂಡವನ್ನು ನಿವೇದಿಸಿದನು. ತರುವಾಯ ಇಬ್ಬರೂ ಸುರಾಪಾನಮಾಡಿ ಮನೆಗೆ ಹಿಂತಿರುಗಿದರು. ಆ ಸ್ಥಳವನ್ನು ಅಗೆಯಲು ಇನ್ನೊಂದು ರಾತ್ರಿಯನ್ನು ಗೊತ್ತುಮಾಡಿ ಬೈರಾಗಿ ಕೊಪ್ಪಕ್ಕೆ ಹೋಗಿ ಬರುತ್ತೇನೆ ಎಂದು ಹೇಳಿ ಹೊರಟುಹೋದನು. ಹೋದವನು ಒಂದು ದಿನ, ಎರಡು ದಿನ, ಮೂರು ದಿನ ಬರಲಿಲ್ಲ. ಮಂಜಣ್ಣನಿಗೆ ಕಳವಳಕ್ಕಾರಂಭವಾಯಿತು. ತಾನು ಮಾಡಿದುದೆಲ್ಲ ವ್ಯರ್ಥವಾಗುವುದೇ ಎಂದು ಚಿಂತಿಸಿದನು. ಆದರೆ ನಾಲ್ಕನೆಯ ದಿನ ಸಾಯಂಕಾಲ ಬೈರಾಗಿ ಬಂದು ಆ ರಾತ್ರಿಯೇ ಗಂಟು ಕೀಳಬೇಕೆಂದು ಹೇಳಿದನು.

ನಡುರಾತ್ರಿ, ಇಬ್ಬರೂ ಹಲಸಿನ ಮರದ ಬುಡವನ್ನು ಸೇರಿದರು.. ಮಂಜಣ್ಣ ಬೈರಾಗಿಯ ನೇತೃತ್ವದಲ್ಲಿ ಸ್ಥಳವನ್ನು ಅಗೆಯತೊಡಗಿದನು. ಮರದ ಬುಡಕ್ಕೂ ಕೈಮೂಡಿದ ಸ್ಥಳಕ್ಕೂ ಒಂದಾಳು ಎತ್ತರವಿತ್ತು. ಮಂಜಣ್ಣ ತಾನು ಹಿಂದೆ ಎಂದೂ ಕೆಲಸಮಾಡದ ರೀತಿಯಲ್ಲಿ ಕೆಲಸ ಮಾಡಿದನು. ನಡುನಡುವೆ ಬೈರಾಗಿಯೂ ಅವನೂ ಬೇಕಾದಷ್ಟು ಹೆಂಡ ಕುಡಿದರು. ಬೈರಾಗಿ ಮಧ್ಯೆಮಧ್ಯೆ ಮಂತ್ರಿಸಿದ ಕುಂಕುಮ ದಾಸವಾಳದ ಹೂವು ಎಲುಬಿನ ಚೂರುಗಳನ್ನು ಕುಣಿಯೊಳಗೆ ಎಸೆಯುತ್ತಿದ್ದನು. ಆ ಕಗ್ಗತ್ತಲೆಯ ರಾತ್ರಿಯಲ್ಲಿ ದೀವದ ಕೆಂಪು ಬೆಳಕಿನಲ್ಲಿ ಅವರಿಬ್ಬರೂ ಕರಾಳಕಾರ್ಯದಲ್ಲಿ ತೊಡಗಿದ ನಿಶಾಚರರಂತೆ ತೋರುತ್ತಿದ್ದಿರಬೇಕು! ಒಂದಾಳುದ್ದ ಅಗೆದರೂ ಗಂಟಿನ ಚಿಹ್ನೆಯೇ ಕಾಣಿಸಲಿಲ್ಲ.

ಮಂಜಣ್ಣ "ಏನು ಗುರುಗಳೇ, ಗಂಟೆಲ್ಲಿ ಹೋಯಿತು?" ಎಂದು ಖಿನ್ನನಾದನು. ಬೈರಾಗಿ "ಹಾಗೆಂದರೇನು? ಯಾವದೋ ಪಿಶಾಚಿ ಗಂಟನ್ನು ಮಾಯಮಾಡಿರಬೇಕು. ನನ್ನ ಮುಂದೆ ಅದರ ಆಟ ನಡೆಯಲಾರದು. ಬ್ರಹ್ಮಗರ್ಭದಲ್ಲಿದ್ದರೂ ಗಂಟನ್ನು ತರಿಸಿಯೇ ಬಿಡುತ್ತೇನೆ. ನೀನು ಆಯಾಸಪಟ್ಟಿದ್ದೀಯೆ, ಸ್ವಲ್ಪ ವಿಶ್ರಮಿಸಿಕೋ.

ನಾನು ಧ್ಯಾನಮಾಡಿ ಮಂತ್ರಗಳನ್ನು ಹೇಳಿ ಮುಂದಿನ ಕೆಲಸ ನೋಡು ತ್ತೇನೆ. ಬೆಳಗಾಗುವುದರೊಳಗಾಗಿ ಗಂಟು ನಿನ್ನ ಕೈಗೆ ಬೀಳುವಂತೆ ಮಾಡಿದರೇನೇ ನಾನು ಬೈರಾಗಿ ಎಂದು ತಿಳಿ. ಇಲ್ಲದಿದ್ದರೆ ಈ ಗಡ್ಡ ಜಟೆಗಳನ್ನು ಕತ್ತರಿಸಿ ನಿನ್ನ ಕೂಲಿಯಾಳಾಗುತ್ತೇನೆ" ಎಂದು ರಭಸದಿಂದ ನುಡಿದನು.

ಪುನಃ ಇಬ್ಬರೂ ಹೆಂಡ ಕುಡಿದರು. ಮಂಜಣ್ಣ ಕಂಬಳಿ ಹಾಸಿ ಒರಗಿದನು. ಬೈರಾಗಿಯು ಧ್ಯಾನಕ್ಕೆ ಕುಳಿತನು. ಮಂಜಣ್ಣನಿಗೆ ಆಯಾಸದಿಂದಲೂ ಕುಡಿದ ಹೆಂಡದಿಂದಲೂ ಗಾಢನಿದ್ರೆ ಬಂದಿತು.

ಇದ್ದಕ್ಕಿದ್ದಹಾಗೆ ಬೈರಾಗಿಯ ಹೂಂಕಾರದಿಂದ ಮಂಜಣ್ಣನಿಗೆ ಎಚ್ಚರವಾಗಿ ಬೆಚ್ಚಿಬಿದ್ದು ತಟಕ್ಕನೆ ಎದ್ದು ಕುಳಿತನು. ಬೈರಾಗಿ ಕುಣಿಯೊಳಗೆ ದಡಕ್ಕನೆ ಹಾರಿದನು. ಮಂಜಣ್ಣ ಎದ್ದು ನಿಂತು ಬೆರಗಾಗಿ ನೋಡುತ್ತಿರಲು ಬೈರಾಗಿ ಕುಂಕುಮ ಹೂವುಗಳಿಂದ ಮುಚ್ಚಿ ಹೋಗಿದ್ದ ಸಣ್ಣ ಕೊಡ ಒಂದನ್ನು ಮೇಲಕ್ಕೆ ಎತ್ತಿಟ್ಟನು. ಸ್ವರ್ಗವೇ ಬಾಗಿಲು ತೆರೆದಂತಾಗಿ ಮಂಜಣ್ಣನು ಅತ್ಯಾನಂದದಿಂದ ಓಡಿಹೋಗಿ ಆ ಕೊಡವನ್ನು ತಬ್ಬಿಕೊಳ್ಳಲು ಮುಂದೆ ನುಗ್ಗಿದನು. ಆದರೆ ಬೈರಾಗಿ ಅಧಿಕಾರಯುಕ್ತವಾದ ಅಂಗಭಂಗಿಯಿಂದ ಅವನನ್ನು ತಡೆದು ಹೇಳ ತೊಡಗಿದನು.

"ಮುಟ್ಟಬೇಡ, ಮಂಜಣ್ಣ. ಈಗ ಮುಟ್ಟಿದರೆ ಸರ್ವನಾಶ ವಾದೀತು. ಕೊಡ ಮಾಯವಾಗುವುದಲ್ಲದೆ, ನಾವಿಬ್ಬರೂ ಇಲ್ಲಿಯೇ ರಕ್ತ ಕಾರಿಕೊಂಡು ಸಾಯುವ ಪ್ರಸಂಗ ಒದಗಬಹುದು. ನೀನು ಮಲಗಿದ್ದೆ, ನಾನು ಪಟ್ಟ ಕಷ್ಟ ನಿನಗೆ ಗೊತ್ತಿಲ್ಲ. ಎರಡು ಸಾರಿ ಈ ಗಂಟಿನ ಅಧಿ ದೇವತೆಗೆ ನಾನೇ ಬಲಿಯಾಗುತ್ತಿದ್ದೆ. ಎರಡುಸಾರಿಯೂ ಅದು ಪ್ರತ್ಯಕ್ಷ ವಾಗಿ ಭಯಂಕರವಾದ ಕೋರೆದಾಡೆಗಳನ್ನು ಮಸೆಯುತ್ತ ನನ್ನನ್ನು ಸಂಹರಿಸಲು ಬಂದಾಗ ನಾನು ನನ್ನ ರಕ್ತವನ್ನೇ ಚೆಲ್ಲಿ ಮಂತ್ರಗಳ ಬಲದಿಂದ ಅದಕ್ಕೆ ತೃಪ್ತಿಯಾಗಿ ಹಿಂತಿರುಗುವಂತೆ ಮಾಡಿದ್ದೇನೆ. ಇಲ್ಲಿ ನೋಡು, ರಕ್ತ!"

ಮಂಜಣ್ಣ ಬೆದರಿ ನೋಡಿದನು. ಬೈರಾಗಿಯ ಕೈಮೈಯೆಲ್ಲ

ನಿಜವಾಗಿಯೂ ರಕ್ತಮಯವಾಗಿದ್ದಂತೆ ಕಂಡಿತು. ಬೈರಾಗಿ ಬೆವರಿ ನಿಟ್ಟುಸಿರುಬಿಡುತ್ತ ಮತ್ತೆ ಹೇಳಿದನು.

"ಈ ಕೊಡದ ತುಂಬ ಚಿನ್ನದ ನಾಣ್ಯಗಳು ತುಂಬಿರಬೇಕು, ಇಲ್ಲದಿದ್ದರೆ ಇಷ್ಟು ಭಾರವಾಗುತ್ತಿರಲಿಲ್ಲ. ನೋಡು, ಕೊಡದ ಬಾಯನ್ನು ಚೆನ್ನಾಗಿ ಬೆಸುಗೆ ಹಾಕಿದ್ದಾರೆ. ಇದಕ್ಕೆ ಪೂಜೆಯಾಗಬೇಕು, ಬಲಿಯಿಡ ಬೇಕು. ಇನ್ನು ಹಲವು ಕರ್ಮಕ್ರಿಯೆಗಳೆಲ್ಲ ಮುಗಿದಮೇಲೆ ಇದು ನಿನ್ನ ದಾಗುವುದು. ಇದನ್ನು ನಿನ್ನ ಮನೆಗೆ ತೆಗೆದುಕೊಂಡು ಬರುತ್ತೇನೆ. ಅಲ್ಲಿ ಒಂದು ಪ್ರತ್ಯೇಕವಾದ ಕೊಠಡಿಯಲ್ಲಿ ಇದನ್ನು ಪ್ರತಿಷ್ಠೆಮಾಡಿ ಒಂದು ತಿಂಗಳು ನಾನಾ ಆಭರಣ ಪುಷ್ಪ ಬಲಿಗಳಿಂದ ಪೂಜೆಮಾಡಬೇಕು. ತರುವಾಯ ಇದೆಲ್ಲಾ ನಿನ್ನದೇ. ನನಗೆ ಒಂದು ಕಾಸೂ ಬೇಡ. ನಾನು ಬೈರಾಗಿ, ನನಗೇಕೆ ಈ ಐಶ್ವರ್ಯ? ಇಂತಹ ಗುಪ್ತ ಧನವನ್ನು ಇನ್ನೆಷ್ಟೋ ಜನಗಳಿಗೆ ಕಿತ್ತು ಕೊಟ್ಟಿದ್ದೇನೆ."

ಆ ಕತ್ತಲೆ, ಆ ಕೆಂಪು ದೀಪ, ಆ ಕುಂಕುಮ ಪುಷ್ಪಶೋಭಿತವಾದ ಕೊಡ, ಆ ರಕ್ತ, ಅಲ್ಲಿ ಬರೆದಿದ್ದ ವಿಕಾರಾಕೃತಿಗಳ ಚಿತ್ರ, ಆ ರುದ್ರರೂಪದ ಬೈರಾಗಿ ಮತ್ತು ಅವನ ಉಪನ್ಯಾಸ— ಇವೆಲ್ಲವನ್ನೂ ನೋಡಿ, ಕೇಳಿ, ಮಂಜಣ್ಣನಿಗೆ ಮಾಯ ಕವಿದಂತಾಯಿತು. ಏನಾದರಾಗಲಿ ಗಂಟು ಬಗಲಿಗೆ ಬಿತ್ತು ಎಂದು ಹಿಗ್ಗಿದನು. ಸ್ವಲ್ಪ ಹೊತ್ತಿನಲ್ಲಿಯೇ ಬೈರಾಗಿ ಕೊಡವನ್ನು ಹೊತ್ತು ತಂದು ಮಂಜಣ್ಣನ ಮನೆಯ ಒಂದು ಕೊಠಡಿಯಲ್ಲಿ ತಾನು ಹೇಳಿದಂತೆ ಪ್ರತಿಷ್ಠೆಮಾಡಿದನು.

ಸರಿ, ದಿನದಿನವೂ ಪೂಜೆ ಔತಣಗಳಿಗೆ ಷುರುವಾಯಿತು. ಮಂಜಣ್ಣ ನಂತೂ ಮುಕ್ತಹಸ್ತನಾಗಿ ಖರ್ಚುಮಾಡಿದನು. ಆ ಕೊಡವನ್ನು ಸಿಂಗರಿಸಲು ತನ್ನ ಮನೆಯಲ್ಲಿದ್ದ ಆಭರಣಗಳನ್ನೂ ಎರವಾಗಿ ತಂದ ನೆರೆಯವರ ಆಭರಣಗಳನ್ನೂ ತನ್ನ ಹೆಂಡತಿಯ ಮೈಮೇಲಿದ್ದ ತಾಳಿ ಯೊಂದುಳಿದು ಎಲ್ಲ ಒಡವೆಗಳನ್ನೂ ಬೈರಾಗಿ ಕೇಳಿದಂತೆಲ್ಲಾ ಕೊಟ್ಟನು. ತನ್ನ ಥೈಲಿ ಬರಿದಾಗುವವರೆಗೂ ದಕ್ಷಿಣೆ ಕೊಟ್ಟನು. ಇಷ್ಟಾದರೂ ನೆರೆಯಮನೆಯವರಿಗೆ ಗಂಟುಕಿತ್ತ ಗುಟ್ಟು ಗೊತ್ತಾಗಲಿಲ್ಲ. ಸಂನ್ಯಾಸಿಯಿಂದ ದೇವತಾರಾಧನೆ ಮಾಡಿಸುತ್ತಾರೆಂದು ತಿಳಿದರು.

ಹೀಗೆ ಹದಿನೈದು ಇಪ್ಪತ್ತು ದಿನಗಳು ಸಾಗಿದುವು. ಒಂದು ದಿನ ಪ್ರಾತಃಕಾಲ ಇದ್ದಕ್ಕಿದ್ದಹಾಗೆ ಮಂಜಣ್ಣನ ಮನೆಯಿಂದ ರೋದನದ ಬೊಬ್ಬೆ ಕೇಳಿಸಿತು. ನೆರೆಯವರು ಗಾಬರಿಗೊಂಡು ಓಡಿಹೋಗಿ ನೋಡಲು ಮಂಜಣ್ಣನೂ ಅವನ ಹೆಂಡತಿಯೂ ಬಾಯಿಬಾಯಿ ಎದೆ ಎದೆ ಬಡಿದುಕೊಂಡು ಗಟ್ಟಿಯಾಗಿ ಗೋಳಿಡುತ್ತಿದ್ದರು. ನೆಲದಮೇಲೆ ಬಾಯಿತೆರೆದು ಕಲ್ಲು ಮಣ್ಣು ತುಂಬಿದ ಕೊಡವೊಂದು ಬಿದ್ದಿತ್ತು. ಬೈರಾಗಿ ಅಲ್ಲಿರಲಿಲ್ಲ. ತಾನು ಕೊಪ್ಪಕ್ಕೆ ಹೋಗಿ ಕಲ್ಲು ಮಣ್ಣು ತುಂಬಿ ಬೆಸುಗೆ ಹಾಕಿಸಿಕೊಂಡು ಬಂದಿದ್ದ ಕೊಡವನ್ನು ಮಂಜಣ್ಣನಿಗೆ ಬಿಟ್ಟು, ಅದಕ್ಕೆ ಪ್ರತಿಯಾಗಿ ಮಂಜಣ್ಣ ಪೂಜೆಗಾಗಿ ಕೊಟ್ಟಿದ್ದ ಒಡವೆ ಹಣ ಎಲ್ಲವನ್ನೂ ದೋಚಿಕೊಂಡು ರಾತ್ರಿಯೇ ಪರಾರಿಯಾಗಿದ್ದನು.

---

# ಮೀನಾಕ್ಷಿಯ ಮನೇಮೇಷ್ಟರು

## ೧

"ಮೀನಾ!"

ಉತ್ತರವಿಲ್ಲ.

ತಾಯಿ ಒಲೆಯ ಮೇಲೆ ಹಿತ್ತಾಳೆಯ ಬೋಗಣಿಯಲ್ಲಿದ್ದ ಪಲ್ಯವನ್ನು ಸೌಟನಿಂದ ತಿರುಗಿಸುತ್ತಿದ್ದುದನ್ನು ನಿಲ್ಲಿಸಿ ಮತ್ತೆ ಗಟ್ಟಿಯಾಗಿ ಕರೆದಳು.

"ಮೀನಾ!"

ಮೀನಾಕ್ಷಿ ಮೆಲ್ಲಗೆ "ಆ್ಞ" ಎಂದಳು. ತಾಯಿಗೆ ಕೇಳಿಸಲಿಲ್ಲ. ಸ್ವಲ್ಪ ಮುನಿದುಕೊಂಡು ಮತ್ತೆ ಕೂಗಿದಳು.

"ಏ ಮೀನೀ."

"ಏನಮ್ಮಾ?" ಮೀನಾಕ್ಷಿಯೂ ಸ್ವಲ್ಪ ಕೋಪದಿಂದಲೆ ಗಟ್ಟಿಯಾಗಿ ಓಕೊಂಡಿದ್ದಳು.

"ಏನು ಮಾಡ್ತಿದ್ದೀಯೆ? ನಿನಗೇನು ಕಿವಿ ಕೆಟ್ಟಿದೆಯೇನೆ? ಓಕೊಳ್ಳಬಾರದೇನೆ?"

ಹೆಣೆದುಕೊಳ್ಳುತ್ತಿದ್ದ ಮಿಂಚುಗಪ್ಪುಗೂದಲಿನ ಉದ್ದವಾದ ಜಡೆಯನ್ನು ಕೈಯಲ್ಲಿ ಹಿಡಿದುಕೊಂಡೇ ಮೀನಾಕ್ಷಿ ಅಡುಗೆ ಮನೆಯ ಬಾಗಿಲಿಗೆ ಬಂದು "ಏನಮ್ಮಾ?" ಎಂದು ಹೊಸ್ತಿಲ ಮೇಲೆ ನಿಂತಳು.

ಮಗಳನ್ನು ನೋಡಿದೊಡನೆಯೆ ತಾಯಿಯ ಸಿಟ್ಟು ಇಳಿದು ಹೋಯಿತು. ನಗುಮೊಗವಾಗಿ ಹೇಳಿದರು.

"ಮೇಷ್ಟರು ಬಂದಾರಂತಾ ಕಾಣ್ತದೆ ಕಣೇ. ಬೇಗ ತಲೆಬಾಚಿಕೊಂಡು ಹೋಗಬಾರದೇನೆ?"

ಮೇಷ್ಟರು ಎಂಬ ಮಾತನ್ನು ಕೇಳಿದ ಕೂಡಲೆ ಉಪದ್ರವದ ನೆನಪಾದಂತಾಗಿ ಮೀನಾಕ್ಷಿಯ ಮುಖ ನಸು ಕಂದಿತು. ಸಿಡುಕಿನಿಂದ ಹೇಳಿದಳು.

"ಬಂದರೆ ಬರಲಿ! ಕೂತಿರ್ತಾರೆ! ದಿನಾ ಹೊತ್ತಿಗೆ ಮುಂಚೆ ಬರೋದು!.."

"ಇನ್ನೆಷ್ಟು ತಡವೇ ಬರೋದು?"

"ಮೊದಲು ಮೊದಲು ಎಂಟೂವರೆ ಒಂಬತ್ತು ಗಂಟೆ ಮಾಡಿಕೊಂಡು ಬರುತ್ತಿದ್ದರು. ಆಮೇಲೆ ಎಂಟು ಗಂಟೆಗೆ ಬರೋಕೆ ಸುರು ಮಾಡಿದರು. ಈಗ ಏಳೂವರೆ ಗಂಟೆಗೆ ಬರ್ತಾರೆ! ಕಾಯ್ಕೊಂಡು ಕೂತಿರಲಿ! ನಾನಿನ್ನೂ ಹೂಮುಡುಕೊಂಡಿಲ್ಲ. ಕುಂಕುಮ ಇಟ್ಟುಕೊಂಡಿಲ್ಲ."

ಮೀನಾಕ್ಷಿ ಹೊರಗೆ ಹೋದಳು. ತಾಯಿ ದಿನದಿನಕ್ಕೂ ಬೆಳೆಯುತ್ತಿದ್ದ ತಮ್ಮ ಮಗಳನ್ನು ನೆನೆದು ಹಿಗ್ಗುತ್ತಾ ಮತ್ತೆ ಪಲ್ಯ ತಿರುಗಿಸತೊಡಗಿದಳು.

೨

ಮೀನಾಕ್ಷಿ "ಕಾಯ್ಕೊಂಡು ಕೂತಿರಲಿ!" ಎಂದು ಹೇಳಿ ಹೋಗಿದ್ದರೂ ಮೇಷ್ಟರು ಬಹಳ ಹೊತ್ತು ಕಾಯಲಿಲ್ಲ. ಓದುವ ಕೋಣೆಯಲ್ಲಿ ಯಾವಾಗಲೂ ಹಾಸಿರುತ್ತಿದ್ದ ಚಾಪೆಯ ಮೇಲೆ ಪದ್ಮಾಸನ ಹಾಕಿ ಕೂತು, ಗೋಡೆಗೆ ಒರಗಿಕೊಂಡು, ಯಾವಾಗಲೂ ತೆರೆದೇ ಇರುತ್ತಿದ್ದ ಬಾಗಿಲ ಕಡೆಗೆ ನೋಡುತ್ತಿದ್ದರು.

ಉಟ್ಟುಕೊಂಡಿದ್ದ ಲಂಗ ಸದ್ದು ಮಾಡುವಷ್ಟು ವೇಗದಿಂದ ಮೀನಾಕ್ಷಿ ಬಂದಳು.

ತರುಣರಾಗಿದ್ದ ಮೇಷ್ಟರ ಮುಖ ಹರ್ಷದಿಂದ ಅರಳಿತು. ಕಣ್ಣು ತೇಜಸ್ವಿಯಾದುವು. "ಓಹೋ ಇವತ್ತು ಸೀರೆ ಉಟ್ಟುಕೊಂಡಿಲ್ಲ!" ಎಂದುಕೊಂಡರು ತಮ್ಮೊಳಗೆ ತಾವೆ.

ಮೀನಾಕ್ಷಿಯ ವಯಸ್ಸು ಲಂಗಕ್ಕೂ ಸೀರೆಗೂ ನಡುವೆ ಉಯ್ಯಾಲೆಯಾಡುತ್ತಿತ್ತು. ಆದರೆ ಈಗ ಆಕೆಗೆ ಲಂಗಕ್ಕಿಂತ ಸೀರೆಯೇ ಚೆನ್ನಾಗಿ ಒಪ್ಪುತ್ತಿತ್ತೆಂದು ಆಕೆಯ ಮನೇಮೇಷ್ಟರ ಅಭಿಪ್ರಾಯವಾಗಿತ್ತು. ಅದೂ ನಿಜವೆ. ಸೀರೆ ಹೊಸ ಪರಿಚಯವಾಗಿದ್ದುದರಿಂದ ಅದನ್ನು

ಉಟ್ಟುಕೊಂಡಾಗಲೆಲ್ಲಾ ಆಕೆಯ ಮುಖ ನಾಣಿನಿಂದ ಕೆಂಪೇರುತಿತ್ತು. ಆ ನಾಚಿಕೆಗೆ ಎಲ್ಲರೂ ತನ್ನನ್ನೇ ನೋಡುತ್ತಾರೆಂಬ ಬಿಂಕ ಬೇರೆ ಸೇರುತಿತ್ತು. ಬಾಲ್ಯವು ಕೌಮಾರಕ್ಕೆ ದಾಟುತ್ತಿದ್ದುದರಿಂದಲೂ ನಾಚಿಕೆ ಬಿಂಕಗಳ ದೆಸೆಯಿಂದಲೂ ಆಕೆ ಉಟ್ಟುಕೊಳ್ಳುತ್ತಿದ್ದ ತರತರದ ಬಣ್ಣ ಬಣ್ಣದ ಸೀರೆಗಳ ಪ್ರಭಾವದಿಂದಲೂ ಸಾಧಾರಣವಾಗಿರುತ್ತಿದ್ದ ಮೀನಾಕ್ಷಿಯ ರೂಪವು ಒಂದು ತೆರನಾದ ಸೌಂದರ್ಯವಾಗಿ ಕಾಣುತ್ತಿತ್ತು. ಆ ಚೆಲುವಿನ ಬಿರಿಮುಗುಳ ಜೇನಿನ ನೋಟದ್ದಾತಣಕ್ಕಾಗಿಯೆ ತುಂಬಿ ಹೊತ್ತಿಗೆ ಮುಂಚೆ ಪಾಠ ಹೇಳಿಕೊಡಲು ಬರುತಿದ್ದುದು. ಈ ಸತ್ಯ ತುಂಬಿಯ ತಲೆಗೂ ಹೊಕ್ಕಿರಲಿಲ್ಲ; ಮೊಗ್ಗಿನ ಎದೆಗೂ ಸೋಂಕಿರಲಿಲ್ಲ.

೩

ಮೀನಾಕ್ಷಿಯ ಮನೇ ಮೇಷ್ಟರಿಗೆ ಸುಮಾರು ಇಪ್ಪತ್ತಕ್ಕೆ ಮೀರಿರ ಬಹುದು ವಯಸ್ಸು. ಆದರೂ ನೋಡುವುದಕ್ಕೆ ಹದಿನೈದು ಹದಿನಾರು ವರ್ಷದವರಾಗಿ ತೋರುತ್ತಿದ್ದರು. ಅದಕ್ಕೆ ಕಾರಣ ಅವರ ಮೈಯಲ್ಲಿದ್ದ ಎಳೆತನವಾಗಿರಲಿಲ್ಲ; ಮನೆಯಲ್ಲಿದ್ದ ಬಡತನವಾಗಿತ್ತು. ಆ ಬಡತನದ ದೆಸೆಯಿಂದಲೇ ಅವರು ನಾಲ್ಕಾರು ಮನೆಗಳಲ್ಲಿ ಹುಡುಗರಿಗೆ ಪಾಠ ಹೇಳಿ ಕೊಡುತ್ತಾ ದುಡ್ಡು ಸಂಪಾದಿಸಿ ತಾವೂ ಹೈಸ್ಕೂಲಿನಲ್ಲಿ ಓದುತ್ತಿದ್ದರು.

ನೋಡುವುದಕ್ಕೆ ಬಡಕಲಾಗಿದ್ದರೂ, ಅವರು ಹಾಕಿಕೊಳ್ಳುತ್ತಿದ್ದ ಉಡುಪು ಯಾವಾಗಲೂ ಸಡಿಲವಾಗಿ ಹಾಸ್ಯಾಸ್ಪದವಾಗಿ ತೋರುತ್ತಿದ್ದರೂ, ಬಿಳಿಯ ಖಾದಿಯ ಟೋಪಿಯ ಹಿಂಭಾಗದಲ್ಲಿ ಜುಟ್ಟಿನ ಕರಿಯ ಗಂಟು ನಿರಂತರ ದೈನ್ಯ ಸೂಚಕವಾಗಿರುತ್ತಿದ್ದರೂ ನೆಮ್ಮದಿಯಾಗಿದ್ದಿದ್ದರೆ ಮೀನಾಕ್ಷಿಯ ಮೇಷ್ಟರು ರೂಪದಲ್ಲಾಗಲಿ ಉಡುಗೆತೊಡುಗೆಗಳಲ್ಲಾಗಲಿ ಷೋಕಿಯಲ್ಲಾಗಲಿ ನವೀನ ಯುವಕರಾರಿಗೂ ಬಿಟ್ಟುಕೊಡುತ್ತಿರಲಿಲ್ಲ ಎಂಬುದನ್ನು ಅವರ ಕಣ್ಣು ಮಾತ್ರ ಸೂಚಿಸುತಿತ್ತು. ಮೈಯಲ್ಲಿ, ಉಡುಪಿನಲ್ಲಿ, ಮೋರೆಯಲ್ಲಿ ತೋರುತ್ತಿದ್ದ ದೀನಭಾವವು ಕಣ್ಣಿನಲ್ಲಿರಲಿಲ್ಲ. ಕಣ್ಣಿನಲ್ಲಿ ಯಾವುದೋ ಒಂದು ಸಮಯನಿರೀಕ್ಷೆ ಮಿಂಚುತಿತ್ತು. ನೋಟವು, ಯಾವುದೋ ಒಂದು ಅವಕಾಶಕ್ಕಾಗಿ ಹೊಂಚುಹಾಕಿಕೊಂಡು ಕಾಯುತ್ತಿರುವಂತೆ, ಇಲಿಯ ಬಿಲದ ಬಾಗಿಲಿನ ಹಸಿದ ಬೆಕ್ಕಿನಂತಿತ್ತು.

ಅವರು ತುಂಬಾ ಬುದ್ಧಿವಂತರೆಂದೇನೋ ಎಲ್ಲರಿಗೂ ಗೊತ್ತಿತ್ತು. ಅವರ ಸ್ಕೂಲಿನಲ್ಲಿ ಅವರ ಪ್ರತಿಭೆಯ ಖ್ಯಾತಿ ಹಬ್ಬಿತ್ತು. ನೋಡುವುದಕ್ಕೆ ಅರಸಿಕ ದರಿದ್ರರಂತಿದ್ದರೂ ಅಂತರಂಗದಲ್ಲಿ ರಸಿಕ ಶ್ರೀಮಂತರಾಗಿದ್ದರು. ಪಠ್ಯಪುಸ್ತಕಗಳನ್ನಲ್ಲದೆ ಇತರ ಸಾಹಿತ್ಯವನ್ನೂ ಓದುತ್ತಿದ್ದರು. ಅದರಲ್ಲಿಯೂ ರಸಸಾಹಿತ್ಯವೆಂದರೆ ಬಹಳ ಪ್ರೀತಿ. ಅವರ ಸ್ಕೂಲಿನ ಪುಸ್ತಕ ಭಂಡಾರದಲ್ಲಿದ್ದ ಕಾದಂಬರಿಗಳೊಂದನ್ನೂ ಅವರು ಓದದೆ ಬಿಟ್ಟಿರಲಿಲ್ಲ. ಕೆಲವು ಕಾದಂಬರಿ ಮತ್ತು ಕಥೆಗಳನ್ನಂತೂ ಅನೇಕಸಾರಿ ಪಾರಾಯಣಮಾಡಿದ್ದರು. ಒಮ್ಮೊಮ್ಮೆ ವಾಸ್ತವಲೋಕಕ್ಕಿಂತಲೂ ಹೆಚ್ಚಾಗಿ ಪುಸ್ತಕಲೋಕದಲ್ಲಿಯೇ ವಾಸಿಸುತ್ತಿದ್ದರು. ತಮಗೆ ಇಷ್ಟರಾಗಿ ತೋರಿಬಂದ ವಾಸ್ತವ ವ್ಯಕ್ತಿಗಳನ್ನು ತಮ್ಮ ಪುಸ್ತಕಲೋಕದ ಪ್ರಜೆಗಳನ್ನಾಗಿ ಮಾಡಿದ ಹೊರತೂ ಅವರಿಗೆ ತೃಪ್ತಿಯಾಗುತ್ತಿರಲಿಲ್ಲ ಮತ್ತು ಅರ್ಥವಾಗುತ್ತಲೂ ಇರಲಿಲ್ಲ. ಹಾಗೆ ಅವರು ತಮ್ಮ ಪುಸ್ತಕ ಜಗತ್ತಿಗೆ ಸೇರಿಸಿದ್ದ ಪ್ರಜೆಗಳಲ್ಲಿ ನಮ್ಮ ಮೀನಾಕ್ಷಿಯೂ ಒಬ್ಬಳಾಗಿದ್ದಳು. ಅವರ ಪುಸ್ತಕ ಪ್ರಪಂಚದ ಮೀನಾಕ್ಷಿಯ ಮೇಲೆ ಅವರ ಸರ್ವಾಧಿಕಾರ ಸಂಪೂರ್ಣವಾಗಿತ್ತು. ಅಲ್ಲಿ ಅವರಿಗೆ ಮೇಷ್ಟರು ಎಂಬ ಬಿರುದು ಸಂಪೂರ್ಣವಾಗಿ ಸಾರ್ಥಕವಾಗಿತ್ತು. ಗುರುವಾದವನು ಶಿಷ್ಯನ ವ್ಯಕ್ತಿತ್ವವನ್ನು ರಚಿಸಬೇಕಲ್ಲವೇ? ಅಲ್ಲಿ, ಆ ಪುಸ್ತಕಪ್ರಪಂಚದಲ್ಲಿ, ತಂದೆತಾಯಿಗಳ ಅಡಚಣೆಯಿಲ್ಲದೆ, ಸಮಾಜದ ಕಟ್ಟುಕಟ್ಟಳೆಗಳ ಕಟ್ಟಿಕಾಲುವೆಗಳಿಲ್ಲದೆ, ಕಡೆಗೆ ಮೀನಾಕ್ಷಿಯ ಸ್ವಂತ ಸಂಸ್ಕಾರಗಳ ವ್ಯಕ್ತಿಸ್ವಾತಂತ್ರ್ಯವೂ ಇಲ್ಲದೆ, ಮೀನಾಕ್ಷಿಯ ವ್ಯಕ್ತಿತ್ವವನ್ನು ಹೇಗೆ ಬೇಕಂದರೆ ಹಾಗೆ ರಚಿಸಬಹುದಾಗಿತ್ತು.

ಆದರೆ ಒಂದೊಂದುಸಾರಿ ಮೇಷ್ಟರ ಮನಸ್ಸಿನ ಪುಸ್ತಕಪ್ರಪಂಚದ ಮೀನಾಕ್ಷಿಗೂ ವಾಸ್ತವಜಗತ್ತಿನ ಮೀನಾಕ್ಷಿಗೂ ಢಕ್ಕಾಢಿಕ್ಕಿಯಾಗಿ ಗುರುಶಿಷ್ಯರಿಬ್ಬರಿಗೂ ಗಡಿಬಿಡಿಯಾಗುತ್ತಿತ್ತು. ಆ ರಸಜಗತ್ತೊಂದರಲ್ಲಿಯೇ ಆಗಿದ್ದರೆ ಇಷ್ಟು ಹೊತ್ತಿಗಾಗಲೆ ಗುರುವಿನ ಪಾಡಿಗೆ ಗುರು, ಶಿಷ್ಯೆಯ ಪಾಡಿಗೆ ಶಿಷ್ಯೆ ಹೋಗುತ್ತಿದ್ದರು. ಆದರೆ ವಾಸ್ತವಜಗತ್ತಿನಲ್ಲಿ ಗುರುವಿಗೆ ಸಂಬಳದ ಕಟ್ಟೂ, ಶಿಷ್ಯೆಗೆ ತಂದೆತಾಯಿಯರ ಭೀತಿಯ ಕಟ್ಟೂ

ಇದ್ದುದರಿಂದ ಅವರು ಪಾಠ ಹೇಳಿಕೊಡುತ್ತಿದ್ದರು, ಇವಳು ಪಾಠ ಕಲಿಯುತ್ತಿದ್ದಳು.

೪

ಮೇಷ್ಟರು ಮೀನಾಕ್ಷಿಯನ್ನು ಅ ಆ ಇ ಈ ಇಂದಲೂ ಬಲ್ಲವರಾಗಿದ್ದರು. ಆಕೆಯನ್ನು ತಮ್ಮ ಕಿರಿತಂಗಿಯಂತೆ ಭಾವಿಸಿ, ಪ್ರೀತಿಸಿ, ಮುದ್ದಿನಿಂದ ಕಲಿಸುತ್ತಿದ್ದರು.

ಮೀನಾಕ್ಷಿ ಕುರೂಪಿಯಲ್ಲದಿದ್ದರೂ ಅಷ್ಟೇನೂ ಮನಮೋಹಿಸುವ ಚೆಲುವೆಯಾಗಿರಲಿಲ್ಲ. ಅವಳಲ್ಲಿದ್ದ ವಿಶೇಷತೆ ಎಂದರೆ ತಲೆ ಕೂದಲು. ಚಿಕ್ಕಂದಿನಲ್ಲಿಯೆ ನೀಳವಾಗಿ ತೋರವಾಗಿ ಕಪ್ಪಗೆ ಬೆಳೆದಿತ್ತು. ಎರಡಲ್ಲ ಮೂರು ಜಡೆಗಳನ್ನು ಬೇಕಾದರೂ ಹಾಕಿಕೊಳ್ಳಬಹುದಿತ್ತು. ಕೆಲವು ಸಾರಿ ಅವಳ ತಾಯಿ ಮೂರು ಜಡೆಗಳನ್ನು ಹಾಕುತ್ತಿದ್ದರು, ವಿರಾಮವಿದ್ದಾಗ. ಮೀನಾಕ್ಷಿ ಮೂರುಜಡೆ ಹಾಕಬೇಕೆಂದು ಪೀಡಿಸಿದರೆ ಜಡೆಗೆರಡರಂತೆ ಕಡುಬು ಕೊಡುತ್ತಿದ್ದರು. ಆದ್ದರಿಂದ ಮೀನಾಕ್ಷಿ ತಾನೇ ಜಡೆಹಾಕಿಕೊಳ್ಳುವುದನ್ನು ಕಲಿತಳು. ಅವಸರವಿಲ್ಲದಿದ್ದಾಗ ಕಡೆಯ ಪಕ್ಷ ಎರಡು ಜಡೆಗಳನ್ನಾದರೂ ಹಾಕಿಕೊಳ್ಳುತ್ತಿದ್ದಳು. ಅದಕ್ಕಾಗಿಯೇ ತಡವಾಗಿ ಪಾಠಕ್ಕೆ ಬರಬೇಕೆಂದು ಮೇಷ್ಟರಿಗೆ ಹೇಳಿದ್ದಳು. ಆದರೆ ಮೇಷ್ಟರಿಗೆ ಆಕೆ ಹೇಗೆ ಜಡೆ ಹಾಕಿಕೊಂಡರೂ ಲಕ್ಷಣವಾಗಿರುತ್ತಿದ್ದುದರಿಂದ ಅವರು ತಡವಾಗಿ ಬರುವುದಕ್ಕೆ ಬದಲಾಗಿ ಹೊತ್ತಿಗೆ ಮುಂಚೆಯೇ ಬರತೊಡಗಿದ್ದರು. ಆ ವಿಚಾರವಾಗಿ ಮೇಷ್ಟರಿಗೂ ಮೀನಾಕ್ಷಿಗೂ ನಾಲ್ಕಾರು ಮಾತುಕತೆ ನಡೆದು ಮೇಷ್ಟರು ಅಂಗಲಾಚಿ ಬೇಡಿಕೊಂಡರು:

"ಅಮ್ಮಾ ನಾನಿನ್ನೂ ಮೂರು ನಾಲ್ಕು ಮನೆಗಳಲ್ಲಿ ಪಾಠ ಹೇಳಿ ಆಮೇಲೆ ಸ್ಕೂಲಿಗೆ ಹೋಗಬೇಕು. ಅದಕ್ಕೋಸ್ಕರ ಬೇಗ ಬರುತ್ತೇನೆ...."

"ಬೇರೆ ಮನೆಗೆ ಹೋಗಿ ಆ ಮೇಲೆ ಇಲ್ಲಿಗೆ ಬನ್ನಿ.."

"ಎಲ್ಲರೂ ಹೀಗೇ ಹೇಳಿದರೆ ಹೇಗೆ ಮಾಡೋದಮ್ಮಾ?"

"ಹಾಗಂತ ಹೇಳಿ ನನಗೊಬ್ಬಳಿಗೇ ಯಾಕೆ ದಿನಾ ಮೊದಲು ಪಾಠಕ್ಕೆ ಬರ್ತೀರಿ. ಅವರ ಮನೆಗಳಿಗೂ ಒಂದೊಂದು ದಿವಸ ಮೊದಲು ಹೋಗಿ."

ಮೇಷ್ಟರು ಮೀನಾಕ್ಷಿಯ ಗಿಣಿಮೂಗನ್ನೇ ನೋಡುತ್ತಾ ದೀನ ವಾಣಿಯಿಂದ "ಅಮ್ಮಾ, ಉಳಿದವರಾರೂ ನಿನ್ನ ಹಾಗಲ್ಲಮ್ಮಾ" ಎಂದರು.

ಮುಖ ಕೆಂಪೇರಿ ಮೀನಾಕ್ಷಿ "ಅದೇನು! ನಾನು ಮಾತ್ರ ನೀವು ಹೇಳಿದ್ಹಾಂಗೆ ಕೇಳ್ತೀನಿ ಅಂತೇನು?" ಎಂದಳು.

"ಹಾಗಲ್ಲಮ್ಮಾ, ಅವರ್‍ಯಾರೂ ನಿನ್ನಷ್ಟು ಒಳ್ಳೆಯವರಲ್ಲ!"

ಮೀನು ಗಾಳದ ಹುಳುವನ್ನು ಕಚ್ಚಿ ನುಂಗುವಂತೆ ಮೀನಾಕ್ಷಿ ಮೇಷ್ಟರ ಆ ಪ್ರಶಂಸೆಗೆ ಸೋತುಹೋದಳು.

ಅಂದಿನಿಂದ ಮೀನಾಕ್ಷಿ ಮೇಷ್ಟರೊಡನೆ ಬೇರೊಂದು ರೀತಿಯಿಂದ ವರ್ತಿಸತೊಡಗಿದಳು. ಮೇಷ್ಟರೂ ಅವಳ ಮೂಗು ಕಣ್ಣು ಹುಬ್ಬು ತಲೆಗೂದಲು ಇವುಗಳ ವಿಚಾರವಾಗಿ ವಿನೋದದಿಂದಲೆಂಬಂತೆ ಹೊಗಳಿಕೆಯ ಮಾತುಗಳನ್ನು ಬಾಯಿಬಿಟ್ಟು ಆಡತೊಡಗಿದರು. ಅಷ್ಟೇನೂ ಸುಂದರಿ ಅಲ್ಲದಿದ್ದರೂ ಸುಂದರಿ ಅನ್ನಿಸಿಕೊಳ್ಳಬೇಕೆಂದು ಮನಸ್ಸಿದ್ದ ಆಕೆಗೆ ಮೇಷ್ಟರ ಮೇಲೆ ವಿಶ್ವಾಸ ಹೆಚ್ಚಿತು. ಕಡೆಕಡೆಗೆ ಮೇಷ್ಟರು ಆದರ್ಶಮೂರ್ತಿಯಾಗಿ ಕಾಣತೊಡಗಿದರು.

ಒಮ್ಮೆ ಮೀನಾಕ್ಷಿ ನೀಲಿ ರೇಶಿಮೆಯ ಸೀರೆಯುಟ್ಟು, ಹೆಣೆದೆರಡು ಜಡೆಗಳನ್ನು ಎರಡು ಹೆಗಲುಗಳ ಮೇಲಿಂದ ಎದೆಯ ಮೇಲೆ ಜೋಲಾಡುವಂತೆ ಹಾಕಿಕೊಂಡು ಪಾಠಕ್ಕೆ ಬಂದಾಗ ಮೇಷ್ಟರು ಮುಕ್ತಕಂಠರಾಗಿ ಹೊಗಳಿದರು. ಅಂದಿನಿಂದ ಅವಳು ಲಂಗ ಹಾಕುವುದನ್ನು ಸಂಪೂರ್ಣವಾಗಿ ವರ್ಜಿಸಿಯೇ ಬಿಟ್ಟಳು.

ಙ

ಒಂದು ದಿನ ಮೇಷ್ಟರು ಓದುಮನೆಯಲ್ಲಿ ಪದ್ಮಾಸನ ಹಾಕಿ ಕೂತು ಮೀನಾಕ್ಷಿಗಾಗಿ ಕಾಯುತ್ತಿದ್ದರು. ಕೆಂಪುಹೂವಂಚಿನ ಹಸುರು ಸೀರೆಯನ್ನುಟ್ಟು ಮೀನಾಕ್ಷಿ ಪಾಠಕ್ಕೆ ಬಂದಳು. ಅವರ ಕಣ್ಣಿಗೆ ಅವಳು ತಮ್ಮ ಪುಸ್ತಕ ಜಗತ್ತಿನ ಮೀನಾಕ್ಷಿಯಾಗಿಯೇ ತೋರಿದಳು. ಕಲೋಪಾಸಕರೂ ಕಾವ್ಯಪ್ರೇಮಿಗಳೂ ಆಗಿದ್ದ ಅವರ ಮನಸ್ಸಿಗೆ ಕನ್ಯೆಯ ಚೆಲುವಿನಲ್ಲಿ ಏನೋ ಒಂದು ಹೊಸ ರುಚಿ ಕಂಡುಬಂದಿತು. ಎಂದೂ

ಕಂಪಿಸದಿದ್ದ ಅವರ ಎದೆ ಏಕೋ ಕಂಪಿಸಿತು. ಮೈ ಬಿಸಿಯಾದ ಹಾಗಾಯಿತು. ಮೀನಾಕ್ಷಿಯ ಕಣ್ಣನ್ನು ಅವರ ಕಣ್ಣು ಎದುರುಗೊಳ್ಳ ಲಾರದಾಯಿತು. ಪಾಠ ಹೇಳುವುದಕ್ಕೆ ಪ್ರಯತ್ನಿಸಿದರೂ ಆಗಲಿಲ್ಲ. ಕೈಲಿದ್ದ ಪುಸ್ತಕ ನಡುಗತೊಡಗಿತು. ಮೈ ಸರಿಯಾಗಿಲ್ಲವೆಂದು ಹೇಳಿ ಪಾಠ ಹೇಳದೆಯೇ ಹೊರಟುಹೋದರು.

ಹೋದವರು ಎರಡು ದಿನಗಳಾದರೂ ಬರಲಿಲ್ಲ. ಮೀನಾಕ್ಷಿಯ ತಂದೆ ಹೇಳಿಕಳುಹಿಸಿದ ಮೇಲೆ ಬಂದು ಏನೇನೋ ನೆವ ಹೇಳಿ ಪುನಃ ಪಾಠಕ್ಕೆ ಪ್ರಾರಂಭಿಸಿದರು.

ಇದಾದ ಕೆಲವು ದಿನಗಳ ಮೇಲೆ ಒಂದು ದಿನ ಬೆಳಗ್ಗೆ ಮೀನಾಕ್ಷಿ ಪಾಠಕ್ಕೆ ಹೋದಾಗ ಮೇಷ್ಟರು ಟೋಪಿಯಿಲ್ಲದೆ ಬಂದಿದ್ದುದನ್ನು ಕಂಡು ಆಶ್ಚರ್ಯಗೊಂಡಳು. ಜುಟ್ಟು ಮಾಯವಾಗಿ ಕ್ರಾಪು ಬಂದದ್ದನ್ನೂ ಕಂಡು ಬೆರಗಾಗಿ ಮುಗುಳುನಕ್ಕಳು. ಮೇಷ್ಟರಿಗೂ ಆ ನಗು ಗೋಚರವಾಯಿತು. ಆ ದಿನ ಮೇಷ್ಟರಿಗೆ ಸರಿಯಾಗಿ ಪಾಠ ಹೇಳಿಕೊಡುವುದಕ್ಕೇ ಆಗಲಿಲ್ಲ. ಸಲಸಲವೂ ಮೀನಾಕ್ಷಿ ತಮ್ಮ ಕ್ರಾಪಿನ ಕಡೆ ನೋಡುತ್ತಿದ್ದಂತೆ ಭಾಸ ವಾಗಿ ಅವರ ಮನಸ್ಸು ಗಡಿಬಿಡಿಗೊಂಡಿತು.

ಮತ್ತೊಂದು ದಿನ ಮೇಷ್ಟರು ಪಾಠಕ್ಕೆ ಬಂದಾಗ ಅವರು ಯಾವಾ ಗಲೂ ಹಾಕಿಕೊಂಡು ಬರುತ್ತಿದ್ದ ಅಂಗಿ ಇರಲಿಲ್ಲ. ಅಡ್ಡಪಂಚೆ ಉಟ್ಟು, 'ಪಂಜಾಬಿ' ಹಾಕಿಕೊಂಡು, ಉತ್ತರೀಯ ತೊಟ್ಟಿದ್ದರು. ಕ್ರಾಪನ್ನು ಚೆನ್ನಾಗಿ ಎಣ್ಣೆ ಹಾಕಿ ನೀವಿ ಬಾಚಿದ್ದರು. ಮುಖದಲ್ಲಿ ಏನೋ ಒಂದು ಹೊಸ ತೇಜಸ್ಸು ಮೂಡಿತ್ತು. ನಿಜವಾಗಿಯೂ ಲಕ್ಷಣವಾಗಿ ಕಾಣುತ್ತಿದ್ದರು. ಮೀನಾಕ್ಷಿಗೆ ಅವರನ್ನು ಮೊದಲು ನೋಡುತ್ತಿದ್ದಂತೆ ನೇರವಾಗಿ ನೋಡುವುದಕ್ಕಾಗಲಿಲ್ಲ. ಆದರೂ ಸಮಯ ದೊರೆತಾಗಲೆಲ್ಲಾ ಕದ್ದು ಕದ್ದು ನೋಡಿ ಮುಗುಳುನಗುತ್ತಿದ್ದಳು. ಪ್ರಬುದ್ಧವಾಗುತ್ತಿದ್ದ ಮೀನಾಕ್ಷಿಯ ಚೇತನವೂ ಅದಕ್ಕೆ ಕಾರಣವಾಗಿರಬೇಕು.

ಮೇಷ್ಟರ ರಸಜಗತ್ತಿನಲ್ಲಿ ಒಂದು ಹೊಸ ಭ್ರಮೆ ಮೂಡಿತು: ಮೀನಾಕ್ಷಿಗೆ ಯೋಗ್ಯನಾದ ಪತಿ ದೊರಕಬೇಕು; ಆತನು ತುಂಬಾ ರಸಿಕ ನಾಗಿರಬೇಕು; ಬರಿ ರಸಿಕನಾಗಿದ್ದರೆ ಸಾಲದು, ಬುದ್ಧಿವಂತನಾಗಿರ

ಬೇಕು; ಬಡವನಾಗಿದ್ದರೂ ಚಿಂತೆಯಿಲ್ಲ; ಬಡವನಾಗಿದ್ದರೇ ಲೇಸು; ಶ್ರೀಮಂತನಾದರೆ ದಕ್ಷಿಣೆಗಲ್ಲದಿದ್ದರೆ ದಾಕ್ಷಿಣ್ಯಕ್ಕಾದರೂ ಕೊಂಡು ಕೊಂಡು ಬಿಡುತ್ತಾನೆ; ಅಲ್ಲಿ ಪ್ರೇಮಕ್ಕೆ ಅವಕಾಶವಿಲ್ಲ; ಇತ್ಯಾದಿ, ಇತ್ಯಾದಿ.

ಮೀನಾಕ್ಷಿಯ ಪತಿಯ ಗುಣ, ಸ್ಥಾನ, ಮಾನಗಳನ್ನು ನಿರ್ಣಯಿಸುತ್ತಾ ಮೇಷ್ಟರಿಗೆ ಅವುಗಳೆಲ್ಲವೂ ತಮ್ಮಲ್ಲಿರುವಂತೆ ಭಾಸವಾಯಿತು. ಆ ಮೇಲೆ ತಾವೇ ಆಕೆಗೆ ಸರಿಯಾದ ವರನೆಂದೂ ತರ್ಕಮಾಡಿದರು: ನಮ್ಮಿಬ್ಬರಿಗೂ ಬಹುಕಾಲದಿಂದ ಪರಿಚಯವಿದೆ; ಆಕೆ ನನ್ನಲ್ಲಿ ತೀವ್ರವಾಗಿ ಅನುರಕ್ತೆಯಾಗಿದ್ದಾಳೆ; ಇಲ್ಲದಿದ್ದರೆ ಹಾಗೇಕೆ ಕದ್ದು ಕದ್ದು ನೋಡುತ್ತಿದ್ದಳು? ನಾಚುತ್ತಿದ್ದಳು? ಮೊದಲಿಗಿಂತಲೂ ದೂರ ಸರಿದು ಕೂರುತ್ತಿದ್ದಳು? ಆಕೆಯ ನೋಟದಲ್ಲಿ ಎಂತಹ ಬೇಟ ಮಿಂಚುತ್ತದೆ? ಬ್ರಹ್ಮನು ನನ್ನನ್ನು ಆಕೆಗಾಗಿ ಆಕೆಯನ್ನು ನನಗಾಗಿ ಸೃಷ್ಟಿಸಿರಬೇಕು. ಇಲ್ಲದಿದ್ದರೆ ಆಕೆ ಯಾರೋ? ನಾನಾರೋ? ವಿಧಿ ನಮ್ಮಿಬ್ಬರನ್ನು ಒಂದುಗೂಡಿಸುತಿತ್ತೆ? ಆಕೆಯ ತಂದೆತಾಯಿಯರಿಗೂ ಬಹುಶಃ ಅದೇ ಉದ್ದೇಶವಿರಬೇಕು. ಇಲ್ಲದಿದ್ದರೆ, ಅಪಾಯವೆಂದೂಹಿಸಿ ನಾನು ಪಾಠ ಹೇಳಿಕೊಡುವುದಕ್ಕೆ ಬರುವುದನ್ನೆ ನಿಲ್ಲಿಸಿಬಿಟ್ಟಾಗ ಅವರೇಕೆ ಒತ್ತಾಯಮಾಡಿ ಮತ್ತೆ ಕರೆಯಿಸುತ್ತಿದ್ದರು? ನೆನೆದಂತೆಲ್ಲಾ ನಡೆದಿದ್ದ ನೂರಾರು ಸಂದರ್ಭಗಳು ಮೇಷ್ಟರ ಮನಸ್ಸನ್ನು ಸಮರ್ಥಿಸಿದುವು. ಆಕೆ (ಮೇಷ್ಟರ ಮನಸ್ಸಿನಲ್ಲಿ ಮೀನಾಕ್ಷಿಯ ಮನೋಹರ ಚಿತ್ರವಿತ್ತು) ಇನ್ನಾವ ಪಿಶಾಚಿಯ (ಮೇಷ್ಟರ ಮನಸ್ಸಿನಲ್ಲಿ ಒಂದು ಭಯಂಕರ ಕುರೂಪಿಯ ಚಿತ್ರ ಮೂಡಿತ್ತು) ಕೈಗೂ ಬಾಯಿಗೂ ಹೊಟ್ಟೆಗೂ ಬೀಳದಂತೆ ನೋಡಿಕೊಳ್ಳುವುದು ದೇವದತ್ತವಾದ ನನ್ನ ಪರಮ ಕರ್ತವ್ಯ ಎಂದು ದೃಢನಿಶ್ಚಯಮಾಡಿಕೊಂಡರು. ಅಲ್ಲದೆ ತಮ್ಮ ಪುಸ್ತಕಲೋಕದಲ್ಲಿ ಮೀನಾಕ್ಷಿಯ ಮತ್ತು ತಮ್ಮ ದಾಂಪತ್ಯ ಜೀವನದ ಶೃಂಗಾರ ಚಿತ್ರಗಳನ್ನು ಚಿತ್ರಿಸಿ ಸವಿಯತೊಡಗಿದರು. ಅಲ್ಲದೆ ಮೀನಾಕ್ಷಿಯ ತಂದೆತಾಯಂದಿರನ್ನೂ ಅತ್ತೆ ಮಾವಂದಿರನ್ನಾಗಿ ಭಾವಿಸತೊಡಗಿದರು.

ಹಿಂದೆ ಮೀನಾಕ್ಷಿಯ ತಾಯಿ ತಮಗೆ ಕಾಫಿ ತಿಂಡಿ ಕೊಟ್ಟಾಗ

ಮೇಷ್ಟರು "ಏನೊ ಬಡ ಹುಡುಗನ ಮೇಲೆ ಕನಿಕರದಿಂದ ವರ್ತಿಸುತ್ತಾರೆ" ಎಂದುಕೊಳ್ಳುತ್ತಿದ್ದರು. ಈಗ ಭಾವೀ ಅಳಿಯನಿಗೆ ಉಪಚಾರ ಮಾಡುತ್ತಿದ್ದಂತೆ ತೋರತೊಡಗಿತ್ತು.

ಒಂದುಸಾರಿ ಅವರು ತಿಂಡಿ ತಿಂದು ಕಾಫಿ ಕುಡಿಯುತ್ತಿದ್ದಾಗ ಮೀನಾಕ್ಷಿಯ ತಂದೆ ಅಲ್ಲಿಗೆ ಬಂದವರು "ಏನ್ರೀ, ಒಳ್ಳೆ ಷೋಕಿಯಾಗಿದ್ದೀರಿ? ಎಲ್ಲಿಯಾದರೂ ವರದಕ್ಷಿಣೆ ಗೊತ್ತಾಗಿದೆಯೋ?" ಎಂದು ವಿನೋದವಾಡಿ ನಕ್ಕರು.

ಮೇಷ್ಟರ ಮುಖಕ್ಕೆ ನಾಚ್ಕೆಂಪೇರಿ "ಹಾಗೇನೂ ಇಲ್ಲ. ನಾನು ಡಿಗ್ರಿ ತೆಗೆದುಕೊಳ್ಳುವವರೆಗೂ ಆ ಪ್ರಸ್ತಾಪಕ್ಕೇ ಹೋಗುವುದಿಲ್ಲ." ಎಂದವರು ಅನೈಚ್ಛಿಕವಾಗಿಯೇ ಎಂಬಂತೆ ಮೀನಾಕ್ಷಿಯ ಕಡೆಗೆ ನೋಡಿದರು.

"ಓಹೋ ಕಾಲೇಜಿಗೆ ಸೇರಿದ್ದೀರೋ!"

೬

"ನಿಮಗೆ ಸ್ಕಾಲರ್‌ಷಿಪ್ ಬಂತಂತೆ! ಹೌದೆ?"

"ಹೌದು!"

"ಬಹಳ ಸಂತೋಷ. ಚೆನ್ನಾಗಿ ಓದಿ ಪಾಸ್‌ಮಾಡಿ. ಒಳ್ಳೆಯದಾಗಲಿ."

ಮೀನಾಕ್ಷಿಯ ತಂದೆ ತಮ್ಮ ಕೊಟಡಿಯೊಳಕ್ಕೆ ಹೋದರು. ಕುರ್ಚಿಯ ಮೇಲೆ ಕುಳಿತಿದ್ದ ಮೇಷ್ಟರು ಒಳಗಡೆಯ ಬಾಗಿಲಿನ ಕಡೆಗೇ ನೋಡುತ್ತಿದ್ದರು. ಮೀನಾಕ್ಷಿಯ ತಂದೆ ಮಾಡಿದ ಆಶೀರ್ವಾದ ಅವರಿಗೆ ಅರ್ಥಪೂರ್ಣವಾಗಿತ್ತು. ಇನ್ನೇನು ಕೆಲದಿನಗಳಲ್ಲಿ ಹೆಣ್ಣುಕೊಡುವ ಪ್ರಸ್ತಾಪ ಮಾಡುತ್ತಾರೆ ಎಂಬುದು ನಿಸ್ಸಂದೇಹವಾದಂತಾಯ್ತು! ಪರಿಶುದ್ಧ ಪ್ರೇಮಾನುಭವದಿಂದ ಯೌವನ ತುಂಬಿದ್ದ ಮೇಷ್ಟರ ಹೃದಯ ಆನಂದಪೂರ್ಣವಾಯಿತು.

"ದಯವಿಟ್ಟು ತೆಗೆದುಕೊಳ್ಳಿ!" ಒಳಗಡೆಯ ಬಾಗಿಲನ್ನೇ ನೋಡುತ್ತಿದ್ದ ಮೇಷ್ಟರು ತಿರುಗಿದರು. ತಂದೆ ಕೊಟಡಿಯಿಂದ ಸಂಬಳದ ಹಣವನ್ನು ತಂದು ಕೈನೀಡಿದ್ದರು.

ಮೇಷ್ಟರು ಎದ್ದು ವಿನಯದಿಂದ ಎರಡು ಕೈಗಳನ್ನೂ ಒಡ್ಡಿ ಸ್ವೀಕರಿಸಿದರು.

"ಎಣಿಸಿಕೊಳ್ಳಿ" ಎಂದರು ತಂದೆ.

"ಪರ್ವಾಇಲ್ಲ" ಎಂದು ಬಾಯಲ್ಲಿ ಹೇಳಿದರೂ ಮೇಷ್ಟರು ಎಣಿಸ ತೊಡಗಿದರು.

"ಮತ್ತೇನೂ ತಿಳಿದುಕೊಳ್ಳಬೇಡಿ. ಇನ್ನು ನೀವು ಪಾಠಕ್ಕೆ ಬರೋದು ಬೇಡ!"

"ಆ್ಞ!" ಮೇಷ್ಟರು ಎಣಿಸುವುದನ್ನು ಹಾಗೇ ನಿಲ್ಲಿಸಿ ತಲೆ ಯೆತ್ತಿದರು.

"ಇನ್ನು ಮೇಲೆ ನಮ್ಮ ಹುಡುಗಿಗೆ ಪಾಠ ಹೇಳುವುದಕ್ಕೆ ಬರುವುದು ಬೇಡ ಎಂದೆ!"

"ಏಕೆ? ಏಕೆ? ಏಕೆ"? ಮೇಷ್ಟರ ಕೊರಳಿನಲ್ಲಿ ಅಳುದನಿಯಿತ್ತು.

"ಏತಕ್ಕೂ ಇಲ್ಲ...."

"ಅದಕ್ಕೇನಂತೆ? ಸುಮ್ಮನೆ ಬಂದು ಪಾಠ ಹೇಳಿ ಹೋಗ್ತೀನಿ. ನೀವೇನೂ ಸಂಬಳ ಕೊಡುವುದು ಬೇಡ."

"ಛೆ! ಹಾಗೆಲ್ಲಾದರೂ ಉಂಟೆ?"

"ಅಯ್ಯೋ, ಹಾಗೆನ್ನಬೇಡಿ. ನೀವು ಮೊದಲಿಂದಲೂ ನನ್ನನ್ನು ಕೈ ಹಿಡಿದು ಕಾಪಾಡಿದ್ದೀರಿ...."

"ಆದರೂ ಬೇಡ.."

"ನನಗೆ ಸ್ಕಾಲರ್‌ಷಿಪ್ ಬರ್ತದೆ!"

"ಇಲ್ಲ; ದಯವಿಟ್ಟು ಕ್ಷಮಿಸಿ!"

ಮೇಷ್ಟರ ಯೌವನಮೂರ್ತಿ ತಲೆಬಾಗಿತು. ಸ್ವಲ್ಪಹೊತ್ತು ಸುಮ್ಮನೆ ನೆಲನೋಡುತ್ತಾ ನಿಂತರು.

"ಹಾಗಾದರೆ, ಬರ್ತೀನಿ; ನಮಸ್ಕಾರ!" ಎಂದು ಸರಸರನೆ ಹೊರಟುಹೋದರು.

೭

ಕೆಲದಿನಗಳಲ್ಲಿ ಮೀನಾಕ್ಷಿಗೆ ಮದುವೆ ಗೊತ್ತಾದ ವಾರ್ತೆ ಮೇಷ್ಟರ ಕಿವಿಗೆ ಬಿತ್ತು. ಅವರಾತ್ಮ ತತ್ತರಿಸಿಹೋಯಿತು. ಬಹುಕಾಲದಿಂದ ಕಟ್ಟಿಕೊಂಡಿದ್ದ ಶೃಂಗಾರಮಂದಿರವು ಭೂಕಂಪಕೆಂಬಂತೆ ಮುರಿದು ಬಿರಿಯಿತು. ಇದ್ದಕ್ಕಿದ್ದ ಹಾಗೆ ಅವರಲ್ಲಿ ಅದುವರೆಗೂ ಸುಪ್ತವಾಗಿದ್ದ ಸಮಾಜ ಸುಧಾರಣಾ ದೃಷ್ಟಿ ಕಣ್ದೆರೆಯಿತು. ಮೂರನೆಯ ಕಣ್ಣು!

ಸಂಜೆ ಅವರೊಡನೆ ವಾಕಿಂಗ್ ಹೋಗುತ್ತಿದ್ದ ಕಾಲೇಜು ಮಿತ್ರರಿಗೆ ಅವರ ವಾಗ್ಧೋರಣೆಯ ರಭಸವನ್ನು ಕಂಡು ಬೆಕ್ಕಸವಾಯಿತು. ಇದ್ದಲು ಹಠಾತ್ತಾಗಿ ಕೆಂಡವಾದುದು ಹೇಗೆ? ಯಾವಯಾವುದೋ ಮಾತಿನ ಮಧ್ಯೆ, ಸಂಭಾಷಣೆಗೆ ಹೊಂದಿಕೊಳ್ಳುವುದೋ ಇಲ್ಲವೋ ಎಂಬುದನ್ನು ಸ್ವಲ್ಪವೂ ಪರಿಗಣಿಸದೆ "ನಮ್ಮ ದೇಶ ಹಾಳಾದುದೇ ಇದಕ್ಕಾಗಿ. ಈ ಸಂಪ್ರದಾಯಬದ್ಧರನ್ನೆಲ್ಲಾ ಬಾಂಬ್ ಮಾಡಬೇಕು. ಶಾಕುಂತಲ ನಾಟಕ ಓದಿಲ್ಲವೇ ಇವರು? ಕಾಳಿದಾಸನು ಹೇಳುವುದೇನು? ಪರಸ್ಪರ ಪ್ರೇಮದಿಂದ ದಾಂಪತ್ಯವುಂಟಾಗಬೇಕು ಎಂದಲ್ಲವೆ? ಓದುವುದು ಶಾಸ್ತ್ರ, ಹಾಕುವುದು ಗಾಣ! ಸರ್ದಾ ಬಿಲ್ ಬೇರೆ ಬಂದಿದೆ! ಕೆಲಸಕ್ಕೆ ಬಾರದ ಸರ್ಕಾರ! ಲಾ ಮಾಡಿದಮೇಲೆ ಅದನ್ನು ಜಾರಿಗೆ ತರವೇ ಇದ್ದರೆ ಅದೆಂಥಾ ಸರ್ಕಾರ! ಉರುಳಿಹೋಗಬೇಕು ಅದು...."!

"ಇದೇನೋ ನೀನು ಹೇಳ್ತಾ ಇರೋದು?"

"ಇದ್ಯಾಕೋ ಹೀಗೆ ಕೋಪಮಾಡ್ತಿದ್ದೀಯಾ?"

"ಯಾರ ಮೇಲೋ?"

"ಯಾರಾದರೂ ಏನಾದರೂ ಮಾಡಿದರೇನೋ ನಿನಗೆ?"

ಮೇಷ್ಟರು ಕಣ್ಣು ಕೆಂಪಗೆ ಮಾಡಿಕೊಂಡು: "ನಿಮಗೆ, ನಿಮಗೆ.. ನಿಮಗೆ ತಲೆಯಿಲ್ಲ; ಹೃದಯವಿಲ್ಲ, ಎದೆಯಿಲ್ಲ. ನೀವೆಲ್ಲ ನಪುಂಸಕರು! ಸ್ವಾರ್ಥತೆ! ಸ್ವಾರ್ಥತೆ! ಬರಿಯ ಸ್ವಾರ್ಥತೆ! ಯಾರಿಗೇನಾದರೂ ಆಗಲಿ; ಯಾರು ಎಲ್ಲಾದರೂ ಸಾಯಲಿ! ನೀವು ಮಾತ್ರ ನೆಮ್ಮದಿಯಾಗಿದ್ದರಾಯಿತು! ಅದಕೇ ಸೋಷಿಯಲಿಸಂ ಬರಬೇಕು ಅಂತಾ ಬಡುಕೊಳ್ತಿರೋದು ನಾನು!...."

"ಅದೇನೊ ಹೌದು!"

"ಬಡುಕೊಳ್ತಿರೋದು!"

"ಸಾಕೋ; ಬಾಯಿಮುಚ್ಕೋ!" ಎನ್ನುತ್ತಾ ಮೇಷ್ಟರು ಮುಂದು ವರಿದರು. ಅವರ ಮುಖವಿಕಾರಕ್ಕೆ ಹೆದರಿ ಯಾರೂ ತಮಾಷೆ ಮಾಡಲಿಲ್ಲ.

ಮೇಷ್ಟರು ಮತ್ತೆ ಕೇಳಿದರು: ಸಂಭಾಷಣೆಗೆ ಬಿಸಿಯೂ ಗಾಂಭೀರ್ಯವೂ ಬರಬೇಕೆಂದು ಇಂಗ್ಲಿಷ್‌ನಲ್ಲಿಯೇ ಮಾತಾಡಿದರು.

"ಒಲಿದು ಮದುವೆಯಾಗುವುದು ಒಳ್ಳೆಯದೆ? ಮದುವೆಯಾಗಿ ಒಲಿಯುವುದು ಒಳ್ಳೆಯದೆ?"

"ಎರಡೂ ಒಳ್ಳೆಯದೇ!"

"ನಿನ್ನ ತಲೆ! ಅದು ಹೇಗೆ?"

"ಒಲಿಯುವುದೊಂದು ಹೌದಾದರೆ ಹಾಗಾದರೇನು ಹೀಗಾದ ರೇನು?"

"ಹಾಗಾದರೇನು! ಹೀಗಾದರೇನು! ನೀನೂ ಒಬ್ಬ ಸಂಪ್ರದಾಯ ಶರಣನೇ! ಒಲಿದು ಮದುವೆಯಾದರೆ ದಾಂಪತ್ಯಜೀವನ ಎಷ್ಟು ರಸ ಪೂರ್ಣವಾಗಿ ಸುಖವಾಗಿ ಅನ್ಯೋನ್ಯವಾಗಿರುತ್ತದೆ! ಒಲಿಯದೆ ಮದುವೆ ಯಾದರೆ ಗತಿ? ಆ ಗಂಡ ಪಿಶಾಚಿಯಾಗಿರಬಹುದು! ಮುದುಕನಾಗಿರ ಬಹುದು! ಕೊಳಕನಾಗಿರಬಹುದು! ರೋಗಿಯಾಗಿರಬಹುದು! ಕ್ರೂರಿ ಯಾಗಿರಬಹುದು!......"

"ಅದು ಬೇರೆಯ ವಿಚಾರ. ನೀ ಹೇಳಿದ್ದೇನು? ಮದುವೆಯಾದ ಮೇಲೆ ಒಲಿದು ಬಾಳುವುದು ಒಳ್ಳೆಯದೊ ಅಲ್ಲವೊ ಎಂದಲ್ಲವೆ? ಈಗ ನೀನು ವರ್ಣಿಸುತ್ತಿರುವುದು ಅದಕ್ಕೆ ಉದಾಹರಣೆಯಲ್ಲ!......"

"ಹೌದು ಕಣೋ, ಆ ಪಾಯಿಂಟ್ ಬಹು ಮುಖ್ಯ......"

"ಪಾಯಿಂಟಂತೆ ಪಾಯಿಂಟ್! ನಿಮ್ಮಂಥವರೇ ಸಾವಿರಾರು ಹೆಣ್ಣುಮಕ್ಕಳನ್ನು ತೆಗೆದುಕೊಂಡುಹೋಗಿ ಕಾಮದ ನರಕಕ್ಕೆ ಬಲಿಗೊಡು ತ್ತಿರುವುದು! ಈಗ ನೋಡಿ......ನನಗೊಂದು ಕೇಸ್ ಈಗತಾನೇ

ಗೊತ್ತಾಗಿದೆ......" ಎಂದು ಮೇಷ್ಟರು ಹೆಸರು ಸ್ಥಳ ಒಂದನ್ನೂ ಹೇಳದೆ ಮೀನಾಕ್ಷಿಯ ವಿಚಾರವನ್ನು ಭಾವಪೂರ್ಣವಾಗಿ ವಿವರಿಸಿದರು.

"ಹಾಗಾದರೆ ನೀನು ಹೇಳುವ ಪ್ರಕಾರ ಆ ಹುಡುಗಿ ತಾನು ಮದುವೆಯಾಗುವವನನ್ನು ಒಲಿದಿಲ್ಲ."

"ಇಲ್ಲ! ಇಲ್ಲ! ಖಂಡಿತ ಇಲ್ಲ!" ಎಂದರು ಮೇಷ್ಟರು.

"ಮದುವೆಯಾದಮೇಲೆ ಒಲಿಯಬಾರದೇನು?"

"ಹೌದು! ಹೌದು! ಒಲಿಯುವುದಿಲ್ಲ ಎಂದು ನಿನಗೆ ಹೇಗೆ ಗೊತ್ತು?"

"ಹೇಗೆ ಗೊತ್ತೆ? ಹೇಗೆ ಗೊತ್ತೆ? ಆ ಹುಡುಗಿ ಎಂಥಾ ಹುಡುಗಿ ಅಂತಾ ತಿಳಿದುಕೊಂಡಿದ್ದೀಯ? ಸೀತೆ ಸಾವಿತ್ರಿಯರಿಗೇನು ಕಡಮೆಯಿಲ್ಲ. ಒಬ್ಬನನ್ನು ಪ್ರೀತಿಸಿದಮೇಲೆ ಮತ್ತೊಬ್ಬನನ್ನು ಎಂದಿಗೂ ಒಲಿಯುವುದಿಲ್ಲ."

"ಹಾಗಾದರೆ ಆ ಮತ್ತೊಬ್ಬನನ್ನು ಚೆನ್ನಾಗಿ ಒಪ್ಪಿ ಒಲಿದಿದ್ದಾಳೆ?"

"ಹೌದು!"

"ಅದು ನಿನಗೆ ಚೆನ್ನಾಗಿ ಗೊತ್ತೇನು?"

ಮೇಷ್ಟರು ಆ ಪ್ರಶ್ನೆ ಕೇಳಿದವನ ಕಡೆಗೆ ದುರುದುರನೆ ನೋಡಿದರು. ಮಾತಾಡಲಿಲ್ಲ. ಮತ್ತೆ ತಡೆದು ಹೇಳಿದರು:

"ಆ ಮುಟ್ಠಾಳ ಗಂಡನಿಗೆ ಒಂದು ಹೆಂಡತಿ ಸತ್ತು, ಇವಳು ಎರಡನೆ ಹೆಂಡತಿಯಂತೆ!"

"ಛೀ! ಛೀ! ಹಾಗಾದರೆ ನಿಜವಾಗಿಯೂ ಅನ್ಯಾಯ!"

"ಏನಾದರೂ ಮಾಡಿ ಆ ಮದುವೆ ತಪ್ಪಿಸೋಕೆ ಆಗೋದಿಲ್ಲವೇನೋ!"

"ನೋಡಬೇಕು! ಎಲ್ಲಾ ಪ್ರಯತ್ನಾನೂ ಮಾಡಿ ನೋಡಬೇಕು."

"ಇಲೋಪ್ ಮಾಡಿದರೆ!"

"ಕಿಡ್‌ನ್ಯಾಪ್ ಅಂತಾ ಆದರೆ!"

"ಅಯ್ಯೋ! ನಿನಗೊಂದು ಹುಚ್ಚು! ಈ ಹಿಂದೂ ಹುಡುಗಿಯರಿಂದ ಇಲೋಪಿಂಗ್ ಸಾಧ್ಯವೇನೋ?"

ಮೇಷ್ಟರು ಮನೆಗೆ ಹಿಂತಿರುಗಿದಮೇಲೆ ಮೀನಾಕ್ಷಿಗೊಂದು ಕಾಗದ, ಅವಳ ಭಾವೀಪತಿಗೊಂದು ಕಾಗದ ಬರೆದರು. ಎಡಗೈಯಲ್ಲಿ ಬರೆದು, "ಅ ಆ ಇ ಈ" ಎಂದು ರುಜು ಹಾಕಿದರು. ಆ ಕಾಗದಗಳೆರಡೂ ವಾಸ್ತವವಾಗಿಯೂ ಹಾನಿಕರಗಳಾಗಿದ್ದುವು.

೮

ಮೀನಾಕ್ಷಿಯ ಪ್ರಣಯಕ್ಕಾಗಿ ತಾವು ಕಾತರರಾಗಿದ್ದಂತೆಯೆ ಆಕೆಯೂ ತಮ್ಮ ಪ್ರೇಯಸಿಯಾಗಲು ಕುದಿಯುತ್ತಿದ್ದಾಳೆ ಎಂದು ಮೇಷ್ಟರು ತಿಳಿದಿದ್ದರು. ಆದರೆ ಮೀನಾಕ್ಷಿಗೆ ಅದಾವುದೂ ತಿಳಿದಿರಲಿಲ್ಲ. ಪ್ರಕೃತ ಸಂದರ್ಭದಲ್ಲಿ ಮೇಷ್ಟರ ನೆನಪೂ ಆಕೆಗಿರಲಿಲ್ಲ. ಯೌವನ ವೇರಿದಂತೆಲ್ಲಾ ಹೆಚ್ಚು ಹೆಚ್ಚು ಭಾವುಕರೂ ರಸಿಕರೂ ಶೃಂಗಾರಿಗಳೂ ಆಗುತ್ತಿದ್ದ ತರುಣ ಮೇಷ್ಟರ ಮನಸ್ಸು ತಾರುಣ್ಯಕ್ಕೇರುತ್ತಿದ್ದ ಮೀನಾಕ್ಷಿಯ ಸಹಜವಾದ ಸರಳವಾದ ಹಾವಭಾವಗಳಿಗೆ ಯಾವ ಯಾವ ವ್ಯಂಗ್ಯಾರ್ಥಗಳನ್ನು ಕಲ್ಪಿಸಿದ್ದಿತೋ ಅವುಗಳೊಂದಕ್ಕೂ ಕಾಲಿರಲಿಲ್ಲ. ಅವರ ಪ್ರಶಂಸೆಗಾಗಿ ಆಶಿಸಿದ್ದಳೆಂಬುದೇನೋ ನಿಜ. ಅವರು ಕಾಲೇಜು ವಿದ್ಯಾರ್ಥಿಯಾಗಿ ಕ್ರಾಪು ಬಿಟ್ಟಮೇಲೆ ಅವರನ್ನು ಪ್ರಶಂಸನೀಯ ದೃಷ್ಟಿ ಯಿಂದ ನೋಡಿದ್ದಳೆಂಬುದೇನೋ ನಿಜ. ಒಮ್ಮೊಮ್ಮೆ ತನ್ನೊಳಗೆ ಮೆಲ್ಲನೆ ಕಣ್ದೆರೆದು ಮೊಳೆತು ಉಕ್ಕಿಬರುತ್ತಿದ್ದ ವಧೂತ್ವಕ್ಕೆ ಮೇಷ್ಟರಲ್ಲಿ ವರತ್ವ ವನ್ನು ಊಹಿಸಿ ತಾತ್ಕಾಲಿಕವಾದ ಬಾಲ್ಯಸಹಜವಾದ ನಲ್ಮೆಗೆ ಮಾರು ಹೋಗಿದ್ದಳೆಂಬುದೂ ತಕ್ಕಮಟ್ಟಿಗೆ ನಿಜ. ಆದರೆ ಆ ವರತ್ವಾರೋಪಣೆಗೆ ಮೇಷ್ಟರೊಬ್ಬರೇ ಪಾತ್ರರಾಗಿರಲಿಲ್ಲ. ಲಕ್ಷಣವಾಗಿದ್ದ ಇನ್ನೂ ಅನೇಕ ತರುಣರೂ (ಗೊತ್ತಿದ್ದವರೂ, ಗೊತ್ತಿಲ್ಲದವರೂ ಸೇರಿ) ಪಾತ್ರರಾಗಿದ್ದರು. ಈಗ ಆಕೆಗೆ ಮದುವೆ ನಿಶ್ಚಯವಾದ ಮೇಲೆ ಆ ಅನೇಕ ಇತರ ತರುಣ ರಂತೆಯೇ ಮೇಷ್ಟರೂ ಅನಾಮಧೇಯರೂ ಅಗಸ್ತ್ಯಭ್ರಾತರೂ ಆಗಿ ಹೋಗಿದ್ದರು. ಅಷ್ಟೇ ಅಲ್ಲದೆ ಆಕೆಯ ಭಾವೀಪತಿಯೂ ಕೂಡ ಅಸ್ಪಷ್ಟ ರಾಗಿದ್ದರು. ಒಂದು ವೇಳೆ ಯಾವುದಾದರೊಂದು ಕಾರಣದಿಂದ ಆ ಸಂಬಂಧ ಬೆಳೆಯದೆ ನಿಂತುಹೋದರೆ ಮನಸ್ಸು ಬೇರೆಯ ಸಂಬಂಧದಲ್ಲಿ

ಬಾಧೆಪಡುತ್ತಿರಲಿಲ್ಲ. ಆಕೆಯ ಮನಸ್ಸಿನಲ್ಲಿ ಸತಿಯತನವು ವರಣಮಾಲೆಯನ್ನು ಹಿಡಿದು ಪತಿಯತನಕ್ಕೆ ಅದನ್ನು ಸೂಡಲು ಸಿದ್ಧವಾಗಿ ನಿಂತಿತ್ತು. ಆ ಪತಿಯತನದ ನಿರ್ಣಯವು ವಿಧಿಗೆ ಸೇರಿತ್ತು. ತಂದೆ ತಾಯಿಗಳು ಒಪ್ಪಬೇಕು; ಪತಿಯಾಗುವವನೂ ಒಪ್ಪಬೇಕು; ಬಹುಶಃ ಪತಿಯ ಬಂಧುಗಳೂ ಒಪ್ಪಬೇಕು; ಸಮಾಜವೂ ಒಪ್ಪಬೇಕು; ಕಡೆಗೆ ಸರ್ಕಾರವೂ ತಾನೂ ಒಪ್ಪದಿರಬಾರದು! ಹೀಗಿದ್ದಿತು ಮೀನಾಕ್ಷಿಯ ಮನಸ್ಸು.

ಸ್ತ್ರೀಯ ಮನೋಮಯ ಕೋಶವು ಪುರುಷನ ಮನೋಮಯ ಕೋಶಕ್ಕಿಂತಲೂ ಹೆಚ್ಚು ಅಸ್ಪಷ್ಟವಾದುದು, ಮಂಜಾದುದು. ಅದರಲ್ಲಿಯೂ ಮದುವೆಯಾಗುವುದಕ್ಕೆ ಮೊದಲು ಅಮೂರ್ತವಾಗಿಯೇ ಇರುತ್ತದೆ; ಅಸಂಖ್ಯಮೂರ್ತವಾಗಿರುತ್ತದೆ ಎಂದರೂ ತಪ್ಪಾಗದು. ಆದ್ದರಿಂದಲೇ ಮುಕ್ಕಾಲು ಮೂರುವೀಸಪಾಲು ಸ್ತ್ರೀಯರು ತಮ್ಮ ಪಾಲಿಗೆ ಬಂದದ್ದರಲ್ಲಿ ತೃಪ್ತರಾಗಿ ತಮಗೂ ನೆಮ್ಮದಿ ತಂದುಕೊಳ್ಳುತ್ತಾರೆ; ತಮ್ಮ ಜೀವನದಲ್ಲಿ ಭಾಗಿಯಾಗುವವರಿಗೂ ನೆಮ್ಮದಿಯಾಗುತ್ತಾರೆ. ಎಲ್ಲಿಯೋ ಸಾವಿರಕ್ಕೆ ಒಬ್ಬರಿಬ್ಬರಿಗೆ ಮಾತ್ರ ಏಕಾಗ್ರತೆ ಅಥವಾ ಏಕವಿಗ್ರಹತೆ ಇರುತ್ತದೆ. ಅಂತಹವರಿಂದ ಮಾನವನ ಜೀವನಕ್ಕೆ ಅನಂತ ಕಲ್ಯಾಣವೂ ಆಗುತ್ತದೆ; ತಪ್ಪಿದರೆ ಅಪಾರ ಕ್ಲೇಶವೂ ದೊರೆಯುತ್ತದೆ. ನಮ್ಮ ಮೀನಾಕ್ಷಿ ಅನಂತ ಕಲ್ಯಾಣಮಯಿಯೂ ಆಗಿರಲಿಲ್ಲ; ಅಪಾರ ಕ್ಲೇಶಕಾರಿಣಿಯೂ ಆಗಿರಲಿಲ್ಲ. ಸಾಧಾರಣ ಸ್ತ್ರೀಯಾಗಿದ್ದಳು. ಆದ್ದರಿಂದಲೇ ಉತ್ತಮ ಸ್ತ್ರೀಯೂ ಆಗಿದ್ದಳು. ಸಾಮಾನ್ಯ ದೈನಂದಿನ ಸಂಸಾರ ದೃಷ್ಟಿಯಿಂದ ಅತ್ಯುತ್ತಮಳೂ ಆಗಿದ್ದಳು.

ತನಗೆ ಗಂಡನಾಗುವಾತನಿಗೆ ಮೊದಲನೆಯ ಹೆಂಡತಿ ತೀರಿ ಹೋಗಿದ್ದಳೆಂಬುದನ್ನು ಕೇಳಿ ಮರುಗಿದಳೇ ಹೊರತು ತಾನು ಎರಡನೆಯ ಹೆಂಡತಿಯಾಗುವೆನಲ್ಲಾ ಎಂದು ಸಂಕಟಪಡಲಿಲ್ಲ. ಅಪ್ಪ ಅಮ್ಮ ಒಪ್ಪಿದ್ದಾರೆ; ಆದ್ದರಿಂದ ಅದು ಸರ್ವಸಮ್ಮತವೇ ಆಗಿರಬೇಕು ಎಂದು ಅವಳ ನಂಬುಗೆ. ಅಲ್ಲದೆ, ಎಲ್ಲದರಲ್ಲಿಯೂ, ಊಟ ಬಟ್ಟೆ, ಒಡವೆ ವಸ್ತು ಎಲ್ಲದರಲ್ಲಿಯೂ ತನಗೆ ಅತ್ಯುತ್ತಮವಾದುದನ್ನೇ ಕೊಡುತ್ತಿರುವ ಪ್ರೀತಿಯ ತಂದೆ ತಾಯಿಗಳು ತನ್ನ ಬಾಳಿನ ಪ್ರಾಣಮೂರ್ತಿಯನ್ನು

ತಂದು ಕೊಡುವಾಗ ಮಾತ್ರ ಉತ್ತಮವಲ್ಲದುದನ್ನು ಆರಿಸುತ್ತಾರೆಯೇ? ಆದ್ದರಿಂದಲೇ ತನ್ನ ಭಾವೀಪತಿಯಲ್ಲಿ ಆಕೆಗಾಗಲೇ ಅನುರಾಗ ಮೊಳೆಯುತೊಡಗಿತ್ತು.

ಒಮ್ಮೆ ನೋಡಿದ ಮಾತ್ರದಿಂದಲೇ ಕಣ್ಣಿನಿಂದ ಕಣ್ಣಿಗೆ ಚಿಮ್ಮುವ ಪ್ರೇಮವು ಮಿಂಚಿನಂತೆ ಉಜ್ವಲವಾಗಿರಬಹುದು. ಆದರೆ ಮಿಂಚಿನಂತೆಯೇ ಕ್ಷಣಿಕವಾಗಿಯೂ, ಚಂಚಲವಾಗಿಯೂ ಇರಬಹುದು. ಅಂತಹ ಪ್ರೇಮ ದಿಂದಲೂ ನಿಜವಾದ ದಾಂಪತ್ಯ ಪ್ರೇಮವು ಮೂಡಬಹುದು. ಆದರೆ ಅದು ಕ್ಷಣಿಕೋತ್ಸಾಹದಿಂದ ಬಿಡುಗಡೆಹೊಂದಿ ಚಿರಕಾಲ ಬಂಧನಕ್ಕೆ ಒಳಗಾಗಬೇಕಾಗುತ್ತದೆ. ಬಾಳಿನ ಒರೆಗಲ್ಲಿನಲ್ಲಿ ಬಹುಕಾಲದವರೆಗೂ ಪರೀಕ್ಷೆಗೊಳಗಾಗಿ ನಿಲ್ಲುವ ಚಿರಪ್ರೇಮವು ಮಿಂಚಿನಂತಲ್ಲ; ನಂದಾದೀಪ ದಂತಿರುತ್ತದೆ. ಅಂತಹ ನಂದಾದೀಪಕ್ಕೆ ಪ್ರೇಮತೈಲವನ್ನು ತುಂಬಿಟ್ಟು ಕೊಂಡ ಹೊನ್ನಿನ ಹಣತೆಯಾಗಿದ್ದಳು ನಮ್ಮ ಮೀನಾಕ್ಷಿ.

ಮೀನಾಕ್ಷಿಯನ್ನು ನೋಡಿಕೊಂಡು ಹೋಗಿದ್ದ ಆಕೆಯ ಭಾವೀ ಪತಿಗೂ ಅದು ವೇದ್ಯವಾಗಿತ್ತು. ಮೊದಲನೆಯ ಸಂಬಂಧದಲ್ಲಿ ಆತನಿಗೆ ಸ್ತ್ರೀಹೃದಯದ ಪರಿಚಯ ತಕ್ಕಮಟ್ಟಿಗಾಗಿತ್ತು. ಆತನ ದೃಷ್ಟಿ ಹೊಸದಾಗಿ ಮದುವೆಯಾಗುವವನ ದೃಷ್ಟಿಯಂತಲ್ಲದೆ ಚೆನ್ನಾಗಿ ವಳಗಿ ಪಕ್ವವಾಗಿತ್ತು. ಆದ್ದರಿಂದಲೆ ಧಾರೆಗೆ ಹಿಂದಿನ ದಿನ ಆತನಿಗೆ ಕೈಸೇರಿದ ಮೇಷ್ಟರ ಹೆಸರಿಲ್ಲದ ಎಡಗೈ ಬರೆಹದ ನಾಟ್‌ಪೆಯ್ಡ್ ಕಾಗದದಿಂದ ಯಾವ ಭಯಂಕರವಾದ ಅನಾಹುತವೂ ಆಗಲಿಲ್ಲ. ಆ ಕಾಗದವನ್ನು ಓದಿ ಆತನ ಚಿತ್ತ ತತ್ತರಿಸಲಿಲ್ಲ ಎಂದಲ್ಲ. ಮೀನಾಕ್ಷಿಯ ಬಾಳನ್ನು ಹಾಳುಮಾಡಲು ಅದು ಸಮರ್ಥವಾಗಲಿಲ್ಲ. ಸದವಕಾಶ ಸಿಕ್ಕಿದಾಗ ಮೀನಾಕ್ಷಿಗೆ ತೋರಿಸ ಬೇಕೆಂದು ಪೆಟ್ಟಿಗೆಯೊಳಗಿಟ್ಟನು.

ಮೇಷ್ಟರು ಮೀನಾಕ್ಷಿಗೆ ಬರೆದ ಕಾಗದ ಆಕೆಯ ಕೈಗೆ ಸೇರಲಿಲ್ಲ. ಆಕೆಯ ತಂದೆಯೇ ಅದನ್ನು ಓದಿ ಹರಿದುಹಾಕಿದರು.

೯

ತಮ್ಮ ಎರಡು ಕಾಗದಗಳ ಸುಂಟರುಗಾಳಿಗೆ ಸಿಕ್ಕಿ ಮೀನಾಕ್ಷಿಯ ವಿವಾಹವು ಹಾರಿಹೋಗುವುದೆಂದು ಭಾವಿಸಿದ್ದ ಮೇಷ್ಟರಿಗೆ ಆಕೆಯ ಮದುವೆ ಸಾಂಗವಾಗಿ ನೆರವೇರಿ ಗಂಡ ಹೆಂಡಿರು ನೆಮ್ಮದಿಯಾಗಿ ಸಂಸಾರ ಮಾಡಿಕೊಂಡಿದ್ದಾರೆ ಎಂಬುದನ್ನು ಕೇಳಿ ಆಶ್ಚರ್ಯವಾಯಿತು; ಕೋಪ ವಾಯಿತು; ಜುಗುಪ್ಸೆಯಾಯಿತು; ಕರುಬು ಮೂಡಿತು.

ನಿರಾಶೆಯ ಕಾವಲಿಯಿಂದ ದುರಾಶೆಯ ಬೆಂಕಿಗೆ ಸಿಡಿಯಿತು ಅವರ ಮನಸ್ಸು. ಆದರೆ ಅವರು ಅದನ್ನು ಹಾಗೆ ಭಾವಿಸಲಿಲ್ಲ. ಏಕೆಂದರೆ ಅವರಿಗದು ಗೊತ್ತಾಗಲಿಲ್ಲ. ತಮ್ಮ ಭ್ರಮೆಯನ್ನು ಕಾಮಪಿಶಾಚಿಯ ಕೈಗೆ ಬಿದ್ದು ಗೋಳಾಡುತ್ತಿರುವ ಮೀನಾಕ್ಷಿಯನ್ನು ಉದ್ಧಾರಮಾಡುವ ಧರ್ಮಬುದ್ಧಿ ಎಂದು ಭಾವಿಸಿದರು. ರಾವಣನನ್ನು ಕೊಂದು ಸೀತೆಯನ್ನು ರಕ್ಷಿಸಿದ ರಾಮನಂತೆ ಮೀನಾಕ್ಷಿಯನ್ನು ಮದುವೆಯಾದ ಕಾಮುಕ ರಾಕ್ಷಸನನ್ನು ಕೊಂದು ಆಕೆಯ ಮಾನವನ್ನು ಕಾಪಾಡಬೇಕೆಂದು ಮನಸ್ಸುಮಾಡಿ ಒಂದು ಹರಿತವಾದ ಚೂರಿಯನ್ನು ಕೊಂಡುಕೊಂಡರು. ಮೀನಾಕ್ಷಿಯ ಪತಿಯ ಮನೆಯನ್ನು ಗೊತ್ತುಹಚ್ಚಿದರು. ಚೂರಿಯನ್ನು ಒಳ ಜೇಬಿನಲ್ಲಿ ಇರುಕಿಕೊಂಡು ಅಲ್ಲಿಗೆ ನಡೆದರು.

ಸಂಜೆ ಕಪ್ಪು ಕಪ್ಪಾಗಿತ್ತು. ಭವ್ಯವಾಗಿದ್ದ ಅವರ ತಾರಸಿ ಮನೆ ವಿದ್ಯುದ್ದೀಪಗಳಿಂದ ದೀಪ್ತವಾಗಿತ್ತು. ಮನೆಯ ಮುಂದಣ ಹೂದೋಟ ದಲ್ಲಿ ಯಾರೋ ತಿರುಗಾಡುತ್ತಿದ್ದರು.

ಅಷ್ಟು ಶೌರ್ಯದಿಂದ ಮುಂದುವರಿದಿದ್ದ ಮೇಷ್ಟರಿಗೆ ಏತಕ್ಕೋ ಏನೋ ಎದೆಯಳುಕಿತು. ಸುಮ್ಮನೆ ಹಿಂತಿರುಗಿ ಬಂದುಬಿಡೋಣ ಎನ್ನಿಸಿತು. ಅಷ್ಟರಲ್ಲಿ ಅದೇ ಮನೆಯೊಳಗೆ ಮೀನಾಕ್ಷಿ ಇರುವುದನ್ನು ನೆನೆದರು. ರಾಕ್ಷಸಪತಿಯ ಕಾಮ ದಂಷ್ಟ್ರಗಳಿಗೆ ಸಿಕ್ಕಿರಬಹುದಲ್ಲವೇ ಆ ಕೋಮಲೆ? ಸುಸಂಸ್ಕೃತನೂ, ರಸಿಕನೂ, ಸುಂದರನೂ ಆದ ನನ್ನನ್ನು ಒಲಿದು ಕಾಡುಮನುಷ್ಯನ ಬಾಯಿಗೆ ತುತ್ತಾದಳಲ್ಲವೇ ಆ ಕೋಮಲೆ, ಎಂದು ಆಲೋಚಿಸುತ್ತ ನಿಂತಿದ್ದ ಮೇಷ್ಟರನ್ನು ಯಾರೋ ಕರೆದಂತಾ ಯಿತು. ಎಚ್ಚರಗೊಂಡು ನೋಡಿದರು. ಹೂದೋಟದಲ್ಲಿ ತಿರುಗುತ್ತಿದ್ದ ವ್ಯಕ್ತಿ ಇಂಗ್ಲಿಷಿನಲ್ಲಿ ಮಾತಾಡಿಸಿದರು.

"ತಾವು ಯಾರನ್ನಾದರೂ ನೋಡಬೇಕೆ? ನನ್ನಿಂದ ಸಹಾಯ ವಾಗುವುದಾದರೆ ಮಾಡುತ್ತೇನೆ. ಯಾರದಾದರೂ ಮನೆಯನ್ನು ಹುಡುಕು ತ್ತಿದ್ದೀರೇನು?"

ಎಂತಹ ಇಂಪಾದ ಧ್ವನಿ! ಏನು ಸಭ್ಯತೆ ಮಾತಿನಲ್ಲಿ! ಮೇಷ್ಟರು ತೊದಲುತ್ತ "ಹೌ......ಹೌದು!" ಎಂದರು.

"ಯಾರು? ಯಾರ ಮನೆ?"

ಮೇಷ್ಟರು ಹೇಳಿದರು.

ಆ ವ್ಯಕ್ತಿ ಬಹಳ ಸಂತೋಷದಿಂದ ಸಂಭ್ರಮದಿಂದ ಗೇಟು ತೆರೆದು "ಒಳಗೆ ಬನ್ನಿ; ದಯವಿಟ್ಟು ಒಳಗೆ ಬರೋಣಾಗಲಿ!" ಎಂದಿತು. ಮೇಷ್ಟರು ಆ ವ್ಯಕ್ತಿಯನ್ನು ಹಿಂಬಾಲಿಸಿ ವಿದ್ಯುದ್ದೀಪಗಳಿಂದ ಪ್ರದೀಪ್ತ ವಾಗಿದ್ದ ಜಗಲಿಗೆ ಹೋದರು.

ಆ ವ್ಯಕ್ತಿ "ಕೂತುಕೊಳ್ಳಿ ದಯವಿಟ್ಟು, ಕೂತುಕೊಳ್ಳಿ."

ಮೇಷ್ಟರು ಮಂಕು ಹಿಡಿದವರಂತೆ ಸೋಫಾದ ಮೇಲೆ ಕೂತು ಕೊಂಡರು. ಆ ವ್ಯಕ್ತಿ ಒಳಗೆ ಹೋದರು.

ಮೇಷ್ಟರು ಸುತ್ತಲೂ ನೋಡಿದರು. ಆ ಮನೆ ಸಂಸ್ಕೃತಿಯ ರಸಿಕತೆಯ ಸೌಂದರ್ಯದ ಬೀಡಾಗಿ ತೋರಿತು. ನೆಲಕ್ಕೆ ಹಾಸಿದ್ದ ರತ್ನ ಗಂಬಳಿಗಳು, ಗೋಡೆಗೆ ತಗುಲಿಸಿದ್ದ ಪಟಗಳು, ಮೇಜಿನ ಮೇಲಿದ್ದ ಹೂವಿನ ಪಾತ್ರೆಗಳು, ಕನ್ನಡಿ ಬೀರುವಿನಲ್ಲಿದ್ದ ಲೈಬ್ರೆರಿ ಒಂದೊಂದೂ ಮೇಷ್ಟರ ಮನಸ್ಸನ್ನು ಬೆರಗುಗೊಳಿಸುತ್ತಿದ್ದುವು.

ಅಷ್ಟರಲ್ಲಿ ಒಳಗೆ ಹೋಗಿದ್ದ ವ್ಯಕ್ತಿ ಹೊರಗೆ ಬಂದು ಅತ್ಯಂತ ಸ್ನೇಹ ಪೂರ್ವಕವಾದ ವಾಣಿಯಿಂದ "ಓಹೋ, ತಾವು ಆಕೆಯ ಮನೇ ಮೇಷ್ಟರೇನು! ಬಹಳ ಸಂತೋಷ! ಬಹಳ ಸಂತೋಷ ತಾವು ಬಂದದ್ದು" ಎಂದು ಕೈ ನೀಡಿದರು. ಮೇಷ್ಟರು ಎದ್ದುನಿಂತು ಕೈ-ನೀಡಿದರು. ಹಸ್ತ ಲಾಘವವಾದ ಮೇಲೆ ಇಬ್ಬರೂ ಎದುರು ಬದುರಾಗಿ ಸೋಫಾಗಳ ಮೇಲೆ ಕುಳಿತುಕೊಂಡರು. ಆ ವ್ಯಕ್ತಿಯೇ ಮೀನಾಕ್ಷಿಯ ಪತಿ ಎಂದು ಮೇಷ್ಟರಿಗೆ ಗೊತ್ತಾಯಿತು.

ಮೀನಾಕ್ಷಿಯ ಪತಿ ಸರಸವಾಗಿ ಮಾತಾಡತೊಡಗಿದರು. ಮೇಷ್ಟರು ಕಾಲೇಜಿನ ವಿದ್ಯಾರ್ಥಿ ಎಂದು ತಿಳಿದಮೇಲಂತೂ ಕವಿಗಳು, ಕಾವ್ಯಗಳು, ಕಾದಂಬರಿಗಳು ಇವುಗಳ ವಿಚಾರವಾಗಿಯೂ ಸ್ವಾರಸ್ಯವಾಗಿ ಸಂಭಾಷಿಸಿದರು. ಅವರು ಆ ಮನೆ ಮತ್ತು ಆ ವ್ಯಕ್ತಿಗಳಲ್ಲಿ ಕಾಣುತ್ತಿದ್ದ ಸಭ್ಯತೆ, ಸಂಸ್ಕೃತಿ ಮತ್ತು ಸೌಂದರ್ಯಗಳಿಗೆ ಮಾರುಹೋದರು. ನಾನೆಲ್ಲಿಯಾದರೂ ಹೆಣ್ಣಾಗಿದ್ದಿದ್ದರೆ ಈ ವ್ಯಕ್ತಿಯೊಡನೆ ಪಾಣಿಗ್ರಹಣಕ್ಕಾಗಿ ಪಂಚಾಗ್ನಿ ತಪಸ್ಸನ್ನು ಬೇಕಾದರೂ ಮಾಡುತ್ತಿದ್ದೆ ಎಂದುಕೊಂಡಿತು ಅವರ ಒಳಮನಸ್ಸು.

ಅಷ್ಟರಲ್ಲಿ ಕಾಫಿಯ ಗಿಂಡಿಯನ್ನೂ ತಿಂಡಿಯ ತಟ್ಟೆಯನ್ನೂ ಕೈಯಲ್ಲಿ ಹಿಡಿದು, ಸೊಗಸು ಸೂಸುವಂತೆ ಸೀರೆಯುಟ್ಟು, ನಸುಲಜ್ಜೆಯಿಂದ ನಾಣ್ಗೆಂಪೇರಿ ಮೀನಾಕ್ಷಿಯೂ ಬಂದಳು.

ಕಾಫಿ ತಿಂಡಿಯನ್ನು ಮೇಜಿನ ಮೇಲಿಟ್ಟು, ಎದ್ದು ನಿಂತು ನಮಸ್ಕಾರ ಮಾಡಿದ ಮೇಷ್ಟರಿಗೆ ನಮಸ್ಕಾರ ಮಾಡಿ, ದೂರದೊಂದು ಕುರ್ಚಿಯ ಮೇಲೆ (ಗಂಡನ ಕಣ್ಣು ಸನ್ನೆಯ ಪ್ರೇರಣೆಯಿಂದ ಎಂದು ಗೊತ್ತಾಯಿತು ಮೇಷ್ಟರಿಗೆ) ಕೂತುಕೊಂಡಳು.

ಮೀನಾಕ್ಷಿ ಯಾವ ಪಿಶಾಚಿಯ ಕೈಗೂ ಸಿಕ್ಕಿ ಗೋಳಾಡುವಂತೆ ಕಂಡುಬರಲಿಲ್ಲ. ದೇವನನ್ನು ಕೈಹಿಡಿದ ದೇವಿಯಂತೆ ತೋರಿದಳು. ಆ ನಾಗರಿಕತೆಯ, ಆ ಸಂಸ್ಕೃತಿಯ, ಆ ಸಭ್ಯತೆಯ, ಆ ರಸಿಕತೆಯ, ಆ ಸೌಹಾರ್ದದ ವಾತಾವರಣದಲ್ಲಿ ಮೇಷ್ಟರ ಹೃದಯದಲ್ಲಿಯೂ, ಅದುವರೆಗೆ ತಪ್ಪುಭಾವನೆಯಿಂದ ಮೂಡಿದ್ದ ದುರಾಶೆಯ ದೆಸೆಯಿಂದ ಮುಳುಗಿಹೋಗಿದ್ದ, ಅವುಗಳೆಲ್ಲವೂ ಮೂಡಿದಂತಾಯ್ತು. ತಮ್ಮ ಕೋಟಿನ ಒಳಗೆ ಎದೆಯ ಪಕ್ಕದಲ್ಲಿದ್ದ ಚೂರಿ ತಮ್ಮ ಎದೆಯೊಳಗೇ ಹೊಕ್ಕಂತೆ ಅನುಭವವಾಯಿತು. ಮೀನಾಕ್ಷಿಯೊಡನೆಯೂ ಆಕೆಯ ಪತಿಯೊಡನೆಯೂ ಮಾತಾಡುತ್ತಿದ್ದರೂ ತಿಂಡಿ ತಿನ್ನುತ್ತಿದ್ದರೂ, ಅವರ ಮನಸ್ಸು ಆ ಚೂರಿಯನ್ನು ನೆನೆದು ಜುಗುಪ್ಸೆಪಡುತ್ತಿತ್ತು. ಅದು ಅಲ್ಲಿರುವುದನ್ನು ತಡೆದುಕೊಳ್ಳಲಾಗಲಿಲ್ಲ. ಮೆಲ್ಲನೆ ಎಡಗೈಯನ್ನು ಕೋಟಿನೊಳಕ್ಕೆ ಹಾಕಿ ಈಚೆಗೆ ತೆಗೆದು ವಿದ್ಯುದ್ದೀಪದಲ್ಲಿ ತಳತಳನೆ ಹೊಳೆಯುತ್ತಿದ್ದ ಅದನ್ನು ಮೇಜಿನಮೇಲಿಟ್ಟರು.

ಮೀನಾಕ್ಷಿ ಕಣ್ಣು ಬಾಯಿ ತೆರೆದು ನೋಡುತ್ತಿದ್ದಳು.

ಆಕೆಯ ಪತಿಯೂ ಆಶ್ಚರ್ಯದಿಂದ "ಅದೇನದು?" ಎಂದು ಕೇಳಿದರು. "ಮೀನಾಕ್ಷಮ್ಮನವರಿಗೆ ವಾಠ ಹೇಳಿಕೊಡುತ್ತಿದ್ದಾಗ ತಮಗೊಂದು ಚಾಕು ಬೇಕು ಎಂದು ಕೇಳಿದ್ದರು. ತಂದುಕೊಡುತ್ತೇನೆ ಎಂದು ಮಾತುಕೊಟ್ಟಿದ್ದೆ, ಇದುವರೆಗೂ ಅದನ್ನು ನೆರವೇರಿಸುವುದಕ್ಕೆ ಆಗಿರಲಿಲ್ಲ" ಎನ್ನುತ್ತಾ ಮೇಷ್ಟ್ರು ತಿಂಡಿ ತಿನ್ನುವುದನ್ನು ನಿಲ್ಲಿಸಿ ಕಾಫಿ ಕುಡಿದರು. ಅವರ ಕಣ್ಣು ತೊಯ್ದಿತು; ಮಾತು ತೊದಲತೊಡಗಿತ್ತು.

ಮೀನಾಕ್ಷಿಯ ಪತಿ ಆ ಚಾಕುವನ್ನು ಕೈಯಲ್ಲಿ ಹಿಡಿದು ನೋಡುತ್ತಾ "ಅಬ್ಬಾ, ಎಷ್ಟು ಹರಿತವಾಗಿದೆ!" ಎಂದರು. ಕಾಫಿ ಕುಡಿದು ಪೂರೈಸಿದ ಮೇಷ್ಟ್ರು ಹಠಾತ್ತಾಗಿ ಸ್ವಲ್ಪ ರಭಸದಿಂದಲೇ ಹೇಳಿದರು, "ನಮ್ಮ ಹೆಣ್ಣು ಮಕ್ಕಳಿಗೆಲ್ಲಾ ಒಂದೊಂದು ಚೂರಿ ಕೊಡಬೇಕು, ಸ್ವಾಮಿ. ಇಲ್ಲದಿದ್ದರೆ ಪುಂಡರು ಪೋಕರಿಗಳಿಗೆ ಬುದ್ಧಿ ಬರುವುದಿಲ್ಲ. ಮೊನ್ನೆ ನೋಡಿ. ಒಬ್ಬ ಜಟಕಾವಾಲನಂತೆ......" ಎಂದು ಕತೆ ಹೇಳಿದರು.

ಆ ಕತೆ ಹೇಳಿದಮೇಲೆ, ಏಕೋ ಏನೊ, ಅವರ ಮನಸ್ಸಿಗೆ ನೆಮ್ಮದಿಯಾಯಿತು.

"ನಾನು ಹೊರಡ್ತೇನೆ, ಸ್ವಾಮಿ."

"ಹೊತ್ತಾಯ್ತು ಊಟಮಾಡಿಕೊಂಡು ಹೋಗಬಹುದು!"

"ಇಲ್ಲ, ಮನೆಯಲ್ಲಿ ನಮ್ಮ ತಾಯಿ ಒಬ್ಬರೆ ಕಾಯ್ತಿರ್ತಾರೆ."

"ಅವರನ್ನೊಂದು ದಿನ ಕರಕೊಂಡು ಬನ್ನಿ" ಎಂದಳು ಮೀನಾಕ್ಷಿ.

"ಆಗಲಿ ತಾಯಿ" ಎಂದರು ಮೇಷ್ಟ್ರು.

"ಆಗಾಗ್ಗೆ ಬರುತ್ತಾ ಇರಿ" ಎಂದರು ಮೀನಾಕ್ಷಿಯ ಪತಿ.

"ಇವತ್ತಿಲ್ಲಿಗೆ ಬಂದು ಗಂಗಾಸ್ನಾನ ಮಾಡಿದಂತಾಯ್ತು ನನಗೆ. ನಾನೂ ಬರ್ತೀನಿ. ನಮ್ಮಮ್ಮನ್ನೂ ಕರ್ಕೊಂಡು ಬರ್ತೀನಿ" ಎಂದು, ಮೇಷ್ಟ್ರು ದಂಪತಿಗಳಿಗೆ ಕೈಮುಗಿದು ಬೀಳ್ಕೊಂಡರು.

---

# ಧನ್ವಂತರಿಯ ಚಿಕಿತ್ಸೆ

ಋಷಿ ವಿಶ್ವಾಮಿತ್ರನು ನಂದನವನದ ಒಂದು ಮೂಲೆಯಲ್ಲಿ, ಕಲ್ಪವೃಕ್ಷದಿಂದ ಸ್ವಲ್ಪ ದೂರವಾಗಿದ್ದು ಅನಾಮಧೇಯವಾಗಿದ್ದ ಮರವೊಂದರ ನೆರಳಿನಲ್ಲಿ, ಹಿಂದಕ್ಕೂ ಮುಂದಕ್ಕೂ ಶತಪಥ ತಿರುಗುತ್ತಿದ್ದನು. ನಿಯತೇಂದ್ರಿಯನಾಗಿದ್ದರೂ ಕೂಡ ಬಯಸಿದೊಡನೆ ಬಯಕೆಗಳನ್ನೆಲ್ಲ ನೀಡುವಂತಹ ಮರದ ನೆರಳಿನಲ್ಲಿರುವುದು ಅಪಾಯಕರವೆಂದು ಅವನಿಗೆ ಅನುಭವದಿಂದ ಗೊತ್ತಾಗಿತ್ತು. ಮನಸ್ಸಿನಲ್ಲಿ ಮಿಂಚುವ ಭಾವ ಚಿಂತಾಪೇಕ್ಷೆಗಳೆಲ್ಲ—ಒಳ್ಳೆಯದು ಕೆಟ್ಟದ್ದು, ಅನುಕೂಲವಾದದ್ದು ಪ್ರತಿಕೂಲವಾದದ್ದು—ವಾಸ್ತವವಾಗುವುದಾದರೆ ಗತಿ? ರಾಜರ್ಷಿಯ ಪಟ್ಟದಿಂದ ಬ್ರಹ್ಮರ್ಷಿಯ ಪಟ್ಟಕ್ಕೆ ಏರಿದ್ದರೂ ಆತನು ತನ್ನ ಚಿತ್ತದ ಸಾತ್ವಿಕತೆಯ ವಿಷಯದಲ್ಲಿ ಅತಿ ವಿಶ್ವಾಸವಿಟ್ಟುಕೊಳ್ಳುವಷ್ಟು ಅಹಂಕಾರಿಯಾಗಿರಲಿಲ್ಲ.

ವಿಶ್ವಾಮಿತ್ರನ ಮನಸ್ಸು ಗಭೀರ ಚಿಂತಾಮಗ್ನವಾಗಿತ್ತು; ಹಾಗೂ ಕಿಂಚಿದುದ್ವಿಗ್ನವಾಗಿತ್ತು. ದೂರದಲ್ಲಿ ಆಮೋದ ಪ್ರಮೋದಗಳಲ್ಲಿ ಅದ್ದಿ ಮೆರೆಯುತ್ತಿದ್ದ ದೇವವಿಲಾಸಿಗಳೂ ವಿಲಾಸಿನಿಯರೂ ಯಾವ ಕಾರಣಕ್ಕಾಗಿಯೋ ಗಹಗಹಿಸಿ ನಕ್ಕಾಗೊಮ್ಮೆ ಋಷಿ ತಲೆಯೆತ್ತಿ ನೋಡಿದನು. ಹುಬ್ಬು ಗಂಟುಹಾಕಿ, ತುಟಿ ಕಚ್ಚಿಕೊಂಡು ಕ್ರುದ್ಧನಾದನು: ಕೋಟ್ಯಂತರ ಕಾಮನಬಿಲ್ಲುಗಳು ರಾಸಲೀಲೆಯಲ್ಲಿ ತೊಡಗಿದ್ದಂತೆ, ಮೆದುಗಾಳಿಗೆ ತಲೆದೂಗಿ ಶೋಭಿಸುತ್ತಿದ್ದು ಕಂಪಿಡಿದು ಹೂವು ತುಂಬಿದ್ದ ತರುಲತೆಗಳ ಮಧ್ಯೆ ರಂಭೆ, ಊರ್ವಶಿ, ತಿಲೋತ್ತಮೆ, ಘೃತಾಚಿ, ಮೇನಕೆ ಮೊದಲಾದ ಅಚ್ಚರಸಿಯರೊಡನೆ ಕರಾಲಿಂಗನ ವಿನ್ಯಾಸದಿಂದ ನರ್ತಿಸಿ ಹಾಡುತ್ತಿದ್ದ ಇಂದ್ರಾದಿ ದೇವತೆಗಳನ್ನು ನೋಡಿ ಸಂಯಮಿಯೂ ವೈರಾಗಿಯೂ ಆಗಿದ್ದ ವಿಶ್ವಾಮಿತ್ರನಿಗೆ ಕನಲಿಕೆಯಾಯಿತು. ಆ ಕನಲ್ಕೆಯಲ್ಲಿ ಕರುಬಿನ ನೆರಳೂ ಇದ್ದಿರಬಹುದು. ಅದರಲ್ಲಿಯೂ ಮೇನಕೆಯನ್ನು ನೋಡಿ ಮಹಾರೋಷ

ಉಂಟಾಯಿತು, ವಿಶ್ವವರಿಯುವಂತೆ ತನ್ನನ್ನು ಅಪಮಾನಕ್ಕೆ ಗುರಿ ಮಾಡಿದ್ದಳಲ್ಲಾ ಎಂದು! ಆದರೂ ಋಷಿ ಶಪಿಸಲಿಲ್ಲ. ಅಮೃತಪಾನ ದಿಂದ ಮದೋನ್ಮತ್ತರಾಗಿ ಶ್ಲೀಲತೆಯನ್ನು ಮೀರಿ ವರ್ತಿಸುತ್ತಿದ್ದ ಸ್ವರ್ಗನಿವಾಸಿಗಳನ್ನು ಜುಗುಪ್ಸೆಯಿಂದ ಕಾಣುತ್ತಾ ಮತ್ತೆ ತಲೆಬಗ್ಗಿಸಿ ಶತಪಥ ತಿರುಗತೊಡಗಿದ್ದನು.

"ಏನು ಸ್ವರ್ಗವೊ ಏನೊ? ಪಡಖಾನೆಗಿಂತಲೂ ಕಡೆಯಾಗಿ ಹೋಗಿದೆ! ನರಕದಲ್ಲಿಯಾದರೂ ಯಾತನೆಯ ಗಾಂಭೀರ್ಯವಿರುತ್ತದೆ. ಇಲ್ಲಿಯ ಲಘುತ್ವಕ್ಕೋ ಇತಿಯಿಲ್ಲ, ಮಿತಿಯಿಲ್ಲ. ತಿಂದುಂಡು ಮೆರೆಯು ವುದು, ತಪಸ್ವಿಗಳನ್ನು ಕೆಡಿಸುವುದು, ದಾನವರೊಡನೆ ಕಾದು ಸೋತೋಡಿ ತ್ರಿಮೂರ್ತಿಗಳನ್ನು ಮರೆಹೊಗುವುದು — ಈ ಮಹತ್ಕಾರ್ಯಗಳಲ್ಲಿಯೇ ಇವರ ಬಾಳೆಲ್ಲ ಪರ್ಯವಸಾನವಾಗುತ್ತದೆ. — ಅದೂ ಕೂಡ ಇಲ್ಲ; ಚಿರಂಜೀವಿಗಳಿಗೆ ಪರ್ಯವಸಾನವೆಲ್ಲಿಂದ?"

ಇಂತು ಋಷಿ ಆಲೋಚಿಸಿ ಕನಿಕರದಿಂದ ಕಿರುನಗೆ ನಗುತ್ತಿದ್ದಾಗಲೇ ಆ ದೇವಾಪ್ಸರೆಯರ ನೃತ್ಯವನ್ನೂ ಮೀರಿ ಆ ಅಮರಗಾನದ ಘೋಷ ವನ್ನೂ ಮೀರಿ ಸುದೀರ್ಘವಾದ ಅತಿಕ್ಲೇಶಯುತವಾದ ಎದೆಯದುರಿಸು ವಂತಹ ನರಳುದನಿಯೊಂದು ನಂದನದ ನೆಲವನ್ನೇ ಬಿರಿದು ಮೂಡಿತೋ ಎಂಬಂತೆ ಕೇಳಿಬಂದಿತು!

ಋಷಿ ಸಿಡಿಲೆರಗಿದವನಂತೆ ಬೆಚ್ಚಿಬಿದ್ದು ಬಾಯ್ದೆರೆದು ನಡುಗಿ ನಿಂತು "ಮತ್ತೆ? ಅದೇ ನರಳುದನಿ!" ಎಂದು ನಿಡುಸುಯ್ದನು.

ಆ ನರಳುದನಿ ಮಜಾಮಾಡುತ್ತಿದ್ದ ದೇವತೆಗಳಿಗೆ ಒಂದಿನಿತೂ ಕೇಳಿಸಿರಲಿಲ್ಲ. ಅವರ ಮಾನರಹಿತ ಪಾನಲೀಲೆ ನಿರಾತಂಕವಾಗಿ ಸಾಗಿತ್ತು!

ಆ ನರಳುದನಿ ವಿಶ್ವಾಮಿತ್ರನನ್ನು ಬಹು ದಿನಗಳಿಂದಲೂ ಹಿಂಬಾಲಿ ಸುತ್ತಿತ್ತು. ಎಲ್ಲಿರಲಿ, ಎಷ್ಟು ಹೊತ್ತಾಗಿರಲಿ, ಏನೇ ಮಾಡುತ್ತಿರಲಿ, ಅದು ಹಠಾತ್ತಾಗಿ ಕಿವಿಗೆ ಬಿದ್ದು ಸ್ಥಿತಪ್ರಜ್ಞನನ್ನೂ ಅಸ್ಥಿರವಾಗಿ ಮಾಡುತ್ತಿತ್ತು. ಕೈಲಾಸಕ್ಕೆ ಹೋಗಿದ್ದಾಗ ಅಲ್ಲಿಯೂ ಕೇಳಿಸಿತ್ತು. ಹಾಗೆಯೇ ವೈಕುಂಠದಲ್ಲಿ, ಹಾಗೆಯೇ ಸತ್ಯಲೋಕದಲ್ಲಿ. ನರಕಕ್ಕೆ

ಸಂಚಾರಾರ್ಥವಾಗಿ ಹೋಗಿದ್ದಾಗಲೂ ಅಲ್ಲಿಯ ಗೋಳಾಟವನ್ನು ಮೀರಿ ಕೇಳಿಸಿತ್ತು, ರಹಸ್ಯವಾದ ಅನಿರ್ದಿಷ್ಟವಾದ ಆ ಆರ್ತನಾದ.

ವಿಶ್ವಾಮಿತ್ರನು ಅದರ ಮೂಲವನ್ನು ಅರಿಯಲು ಪ್ರಯತ್ನ ಮಾಡಿದ್ದರೂ ಫಲಕಾರಿಯಾಗಿರಲಿಲ್ಲ. ವೈಕುಂಠದಲ್ಲಿ ವಸಿಷ್ಠರನ್ನು ವಿಚಾರಿಸಿದಾಗ ಅವರು ತಮಗೆ ಆ ನರಳು ಕೇಳಿಸುತ್ತಿಲ್ಲವೆಂದೂ, ಅದು ವಿಶ್ವಾಮಿತ್ರನ ಮನೋಭ್ರಾಂತಿಜನ್ಯವಾಗಿರಬೇಕೆಂದೂ ಹೇಳಿ, ಅದರ ಪರಿಹಾರಾರ್ಥವಾಗಿ ಒಂದು ಯಜ್ಞವನ್ನು ನೆರವೇರಿಸುವಂತೆ ಬುದ್ಧಿ ಹೇಳಿದರು. ಆದರೆ ವಿಶ್ವಾಮಿತ್ರನಿಗೆ ಹಳೆಯ ಕಂದಾಚಾರಗಳಲ್ಲಿ ನಂಬುಗೆ ತಪ್ಪಿಹೋಗಿತ್ತಾದ್ದರಿಂದ ವಸಿಷ್ಠರ ಗೊಡ್ಡು ಬುದ್ಧಿವಾದಕ್ಕೆ ಶರಣಾಗಿರಲಿಲ್ಲ.

ವಿಶ್ವಾಮಿತ್ರನು ಆಲೋಚಿಸುತ್ತಾ ತಲೆಯೆತ್ತಿ ನೋಡಿದಾಗ ಪರಶುರಾಮನು ತಾನಿದ್ದಲ್ಲಿಗೆ ಬರುತ್ತಿದ್ದುದನ್ನು ಕಂಡನು. ರೇಣುಕಾತನಯನ ಮುಖದಲ್ಲಿಯೂ ಮೋಡ ಕವಿದಂತಿತ್ತು. ಅವಸರವಾಗಿ ಬಳಿಗೆ ಬಂದನು.

"ಕುಶಿಕತನಯಾ, ನಿನಗೊಂದು ನರಳುದನಿ ಕೇಳಿಸಿತೆ?" ಎಂದು ವಿಶ್ವಾಮಿತ್ರನ ಹೆಗಲಮೇಲೆ ಬಲಗೈಯಿಟ್ಟು ಪ್ರಶ್ನಿಸಿದನು.

ವಿಶ್ವಾಮಿತ್ರನು ಪರಶುರಾಮನಿಗೆ ತನಗೆ ಅದುವರೆಗೆ ಆಗಿದ್ದ ಅನುಭವಗಳನ್ನೆಲ್ಲಾ ಹೇಳಿದನು. ಪರಶುರಾಮನೂ ತನಗೂ ಅದೇ ಅನುಭವಗಳಾದುದನ್ನು ತಿಳಿಸಿ, ಅದಕ್ಕೆ ಕಾರಣವನ್ನು ತಿಳಿಯಲು ತ್ರಿಭುವನ ಸಂಚಾರಕ್ಕೆ ಹೊರಟಿರುವುದಾಗಿಯೂ ಹೇಳಿದನು.

ಅವರು ಮಾತಾಡುತ್ತಿದ್ದಾಗಲೆ ಮತ್ತೆ ದೇವಾಪ್ಸರೆಯರ ಆನಂದ ನಿನಾದಗಳನ್ನೆಲ್ಲಾ ನುಂಗಿ ಮೀರಿ ಆ ನರಳು, ನೆತ್ತರು ಹೆಪ್ಪುಗಡುವಂತೆ, ಕೇಳಿಸಿತು. ಋಷಿಗಳಿಬ್ಬರೂ ದಿಗ್ಭ್ರಾಂತರಾಗಿ ಗದಗದನೆ ನಡುಗುತ್ತಾ ನಿಂತರು! ಯಾವನಾದರೊಬ್ಬನನ್ನು ಮುಳ್ಳಿನ ಹಾಸಗೆಯ ಮೇಲೆ ಅಂಗಾತನೆ ಮಲಗಿಸಿ, ಎದೆಯಮೇಲೆ ಹೆಬ್ಬಂಡೆಯನ್ನು ಬಹುಕಾಲದ ವರೆಗೂ ಹೇರಿ, ಮಣಭಾರದ ಸುತ್ತಿಗೆಯಿಂದ ಬೀಸಿಬೀಸಿ ಹೊಡೆದರೆ, ಅವನು ಹೇಗೆ ನರಳಬಹುದೋ ಹಾಗಿದ್ದಿತು ಆ ಬೀಭತ್ಸಕರವಾದ ನರಳು!

ವಿಶ್ವಾಮಿತ್ರ ಪರಶುರಾಮರ ಕಾಲುಗಳ ನಡುಕವಿನ್ನೂ ಇಳಿದಿರಲಿಲ್ಲ. ಅಷ್ಟರಲ್ಲಿ ನಾರದನೂ ಲೋಕಾಭಿರಾಮನಾಗಿ ಹರಿಕೀರ್ತನೆ ಮಾಡುತ್ತಾ

ಆ ಮಾರ್ಗವಾಗಿ ವೈಕುಂಠದ ಕಡೆಗೆ ಹೋಗುತ್ತಿದ್ದನು. ಋಷಿಗಳಿಬ್ಬರೂ ಬೇಗಬೇಗನೆ ತ್ರಿಲೋಕ ಸಂಚಾರಿಯ ಬಳಿಗೆ ನಡೆದು ತಮ್ಮ ಅನುಭವದ ಕಾರಣದ ವಿಚಾರವಾಗಿ ಪ್ರಶ್ನಿಸಿದರು. ನಾರದನ ಮುಖದಲ್ಲಿ ಕಿರುನಗೆಯೂ ಮಿಂಚಿತ್ತು; ಕಣ್ಣುಗಳಲ್ಲಿ ನೀರೂ ಸುರಿದುವು. ಆ ಪರಸ್ಪರ ವಿರುದ್ಧ ಭಾವದ ಘಟನೆಗಳನ್ನು ಕಂಡು ವಿಶ್ವಾಮಿತ್ರ ಪರಶುರಾಮರು ಬೆಕ್ಕಸ ಪಡುತ್ತಿರಲು "ಆ ನರಳುದನಿ ಬಹುಕಾಲದಿಂದಲೂ ನನಗೆ ಕೇಳಿಸುತ್ತಿದೆ! ಕೇಳಿದಾಗಲೆಲ್ಲಾ ನನ್ನೆದೆ ನಡುಗುತ್ತದೆ! ಜೀವ ಹಿಂಡಿದಂತಾಗುತ್ತದೆ. ಅದಕ್ಕೆ ಕಾರಣ ನನಗೂ ಸರಿಯಾಗಿ ಗೊತ್ತಿಲ್ಲ. ಅದು ಬರುವುದಂತೂ ಭೂಲೋಕದಿಂದ ಎಂಬುದು ಚೆನ್ನಾಗಿ ಗೊತ್ತು" ಎಂದೊರೆದು ದೇವರ್ಷಿ ಗಾನಗೈಯುತ್ತಾ ಹೊರಟುಹೋದನು. ಬ್ರಹ್ಮರ್ಷಿಗಳಿಬ್ಬರೂ ಭೂಲೋಕದ ಕಡೆಗೆ ವೇಗವಾಗಿ ನಾಗಿದರು.

ಭೂಮಿಯನ್ನು ಸಮೀಪಿಸುತ್ತಿದ್ದಾಗಲೆ ವಿಶ್ವಾಮಿತ್ರ ಪರುಶರಾಮ ರಿಬ್ಬರೂ ಡಂಗುಬಡಿದುಹೋದರು. ಗುರುತಿಸಲಸಾಧ್ಯವಾಗುವಷ್ಟು ವ್ಯತ್ಯಾಸ ಕಂಡುಬಂದಿತು, ಹಿಂದೆ ಅವರಿದ್ದ ಕಾಲದ ಭೂಮಿಗೂ ಈಗಿನ ಕಾಲದ ಭೂಮಿಗೂ. ನಾಗರಿಕತೆ ಮತ್ತು ಸಂಸ್ಕೃತಿಗಳೊಡನೆ ಅವುಗಳನ್ನು ಕ್ಷಣಮಾತ್ರದಲ್ಲಿ ಬೇಕಾದರೂ ಹಾಳುಮಾಡಿಬಿಡುವ ಅನಾಗರಿಕತೆ ಮತ್ತು ಅಸಂಸ್ಕೃತಿಗಳೂ, ಜೀವವನ್ನು ಸಂರಕ್ಷಿಸುವ ವೈದ್ಯ ವಿದ್ಯೆಯೊಡನೆ ರೋಗ ಕಾರಿಗಳಾದ ದುಷ್ಟ ಪದ್ಧತಿಗಳೂ, ಸಿರಿಯೊಡನೆ ಬಡತನವೂ, ರೈಲು, ಮೋಟಾರು, ವಿಮಾನ, ಅಲೆಯಂಚೆ, ವಿದ್ಯುಚ್ಛಕ್ತಿ, ಬಂದೂಕು, ಬಾಂಬು, ಕಾಗದ, ಮುದ್ರಾಯಂತ್ರ, ಇತ್ಯಾದಿ ಇತ್ಯಾದಿ ಇತ್ಯಾದಿಗಳನ್ನು ಕಾಣುತ್ತಾ ಹೊಗಳುತ್ತಾ ವಿಮರ್ಶಿಸುತ್ತಾ ನವೀನ ನರವೇಷದಿಂದ ದೊಡ್ಡ ನಗರ ವೊಂದಕ್ಕೆ ಬಂದಿಳಿದರು.

ಯಂತ್ರ ವಾಹನಗಳ ಸಂಚಾರ, ಮನುಷ್ಯರ ಓಡಾಟ, ವ್ಯಾಪಾರದ ಗಲಿಬಿಲಿ, ಹೋಟೆಲುಗಳ ನೂಕುನುಗ್ಗಲು, ವಿದ್ಯುಚ್ಛಕ್ತಿ ತಂತಿಗಳ ಹಾಸುಹೊಕ್ಕು ಮತ್ತು ಕಂಬಗಳ ಕಿಕ್ಕಿರಿತ, ಚಿತ್ರವಿಚಿತ್ರ ಪ್ರಕಟನೆಗಳ ಪ್ರದರ್ಶನ, ಮದ್ಯಪಾನನಿರೋಧದ ಆಫೀಸಿನ ಹಿಂದುಗಡೆ ಸೇಂದಿಯಂಗಡಿ, ಪೋಲೀಸು ಠಾಣೆಯ ಹಿಂಭಾಗದ ಮನೆಯ ಉಪ್ಪರಿಗೆಯಲ್ಲಿ ಜೂಜಿನ

ಮನೆ, ಗಲ್ಲಿಯಲ್ಲಿ ಯಾರೂ ಅಸಹ್ಯ ಮಾಡಬಾರದು ಎಂದು ಬರೆದಿದ್ದ ಬೋರ್ಡಿನ ಕೆಳಗೇ ಸಹಿಸಲಸಾಧ್ಯವಾದ ದುರ್ಗಂಧ, ಸಿನಿಮಾ, ನಾಟಕ ಶಾಲೆ, ಕಾರಖಾನೆ, ಸ್ಕೂಲು, ಕಲಾಶಾಲೆ, ಇತ್ಯಾದಿ ಇತ್ಯಾದಿಗಳನ್ನೆಲ್ಲಾ ಆಶ್ಚರ್ಯ ಕುತೂಹಲ ಜುಗುಪ್ಸೆ ಮತ್ತು ಹರ್ಷಗಳಿಂದ ಸಮಾಕ್ಷಿಸುತ್ತಾ ನರಳುದನಿಗೆ ಮೂಲವಾದ ಕಾರಣವನ್ನರಸಿದರು.

ಅರಸುತ್ತ ಒಂದು ದೇವಾಲಯಕ್ಕೆ ಹೋದರು. ಅಲ್ಲಿ ಪೂಜಾರಿ, ಗುಡಿಯಲ್ಲಿ ದೇವರಿಲ್ಲವೆಂಬ ದೃಢನಂಬುಗೆಯಿಂದ ಕುಳಿತು, ಪೂಜೆಗೆ ಬಂದಿದ್ದವರಿಂದ ಹಣ ಸುಲಿಯುತ್ತಿದ್ದುದನ್ನೂ ಅಲ್ಲಿಗೆ ಬಂದಿದ್ದ ಭಕ್ತರ ವ್ಯಾಪಾರ ಬುದ್ಧಿಯನ್ನೂ ನೋಡಿ ಋಷಿಗಳಿಬ್ಬರಿಗೂ ನಗುಬಂದಿತು.

ವಿಶ್ವಾಮಿತ್ರನು ಪರಶುರಾಮನನ್ನು ಕುರಿತು "ರೇಣುಕಾತನಯಾ, ನೋಡಿದೆಯಾ ಈ ಪುರೋಹಿತ ವರ್ಗದವರು ಅಂದಿದ್ದಂತೆಯೇ ಇಂದೂ ಇದ್ದಾರಲ್ಲಾ. ಪ್ರಪಂಚ ಇಷ್ಟು ಬದಲಾಯಿಸಿದ್ದರೂ ಅವರು ಮಾತ್ರ 'ಸ್ಥಾಣುರಚಲೋಽಯಂ' ಆಗಿಬಿಟ್ಟಿದ್ದಾರೆ" ಎಂದನು.

ಪರಶುರಾಮನು "ಪಾಪ, ಪುರೋಹಿತರೇನುಮಾಡಿಯಾರು? ಆಗಿನಕಾಲದ ದೊರೆಗಳಿಗನುಗುಣವಾಗಿ ಆಗಿನ ಪುರೋಹಿತರಿದ್ದರು. ಈಗಿನ ಕಾಲದ ದೊರೆಗಳಿಗನುಸಾರವಾಗಿ ಈಗಿನ ಪುರೋಹಿತರಿದ್ದಾರೆ" ಎಂದು ಕ್ಷತ್ರಿಯರ ಮೇಲೆಯೇ ದೂರನ್ನು ಹೊರಿಸಿದನು.

ಇನ್ನೊಂದು ಕಡೆ ಒಂದು ಮಂದಿರದಲ್ಲಿ ಜನರು ಕಿಕ್ಕಿರಿದಿದ್ದುದನ್ನು ಕಂಡು, ಅಲ್ಲಿಗೆ ಹೋಗಿ ನೋಡಲಾಗಿ, ಹರಿಕಥೆಯಾಗುತ್ತಿತ್ತು. ಆ ದಾಸನು ಭಗವಂತನ ಕರುಣೆಯನ್ನು ಕುರಿತು ಕೇಳುತಿದ್ದವರ ಕಣ್ಣುಗಳಲ್ಲಿ ನೀರು ಬರುವಂತೆ ಮಾತಾಡುತ್ತಿದ್ದನು. ಋಷಿಗಳಿಬ್ಬರೂ ತುಸು ಹೊತ್ತು ಕೇಳುತ್ತಾ ನಿಂತಿದ್ದರು. ಅಷ್ಟರಲ್ಲಿಯೇ ಆ ದಾಸನು ತಪಸ್ಸಿನ ಮಹಿಮೆಯನ್ನು ಕುರಿತು ಹೇಳುತ್ತಾ ಪರುಶುರಾಮ ವಿಶ್ವಾಮಿತ್ರರ ಕಥೆಗಳನ್ನೇ ಪ್ರಾರಂಭಿಸಿಬಿಟ್ಟನು. ತಮಗೆ ಅಷ್ಟು ನೂತನವಾಗಿದ್ದ ಆ ಕಥೆಗಳನ್ನು ಋಷಿಗಳಿಬ್ಬರೂ ಬಾಯಿಬಿಟ್ಟುಕೊಂಡು ಕೇಳಿದರು. ಅವರ ಮಹಿಮೆ ಅವರಿಗೇ ಗೊತ್ತಿರಲಿಲ್ಲ!

ಪರುಶುರಾಮನು "ಆ ದಾಸನು ಯಾವ ವಿಶ್ವಾಮಿತ್ರನನ್ನು

ಕುರಿತು ಮಾತನಾಡುತ್ತಿರುವುದು, ಕುಶಿಕತನಯಾ?'' ಎಂದು ನಗುತ್ತಾ ಕೇಳಿದನು.

ವಿಶ್ವಾಮಿತ್ರನು ''ಅವನು ನನ್ನನ್ನಾಗಲಿ ನಿನ್ನನ್ನಾಗಲಿ ಕುರಿತು ಮಾತಾಡುತ್ತಿಲ್ಲ, ಪುರಾಣ ಹೇಳುತ್ತಿದ್ದಾನೆ!'' ಎಂದನು.

ಮತ್ತೊಂದೆಡೆ ದೊಡ್ಡದೊಂದು ಸಭೆ ಸೇರಿದ್ದಿತು. ಬಾಗಿಲಲ್ಲಿ ಬಣ್ಣದ ಬಟ್ಟೆಯ ಬಿಚ್ಚುಗತ್ತಿಯ ಸಿಪಾಯಿಗಳು ನಿಂತಿದ್ದರು. ಜರಿಯ ಪೇಟದ, ಕ್ಯಾಪಿನ, ಹ್ಯಾಟಿನ, ಬೂಟ್ಸಿನ, ನಿಲುವಂಗಿಯ, ಕುಳ್ಳಂಗಿಯ, ತರತರದ ವೇಷದವರು ಅಲ್ಲಿಗೆ ಹೋಗುತ್ತಿದ್ದುದನ್ನು ಕಂಡು ಋಷಿಗಳಿಬ್ಬರೂ ಅವರಂತೆಯೇ ಕಾಣಿಸಿಕೊಂಡು ಒಳಗೆ ಹೋದರು. ಎಲ್ಲರೂ ಸುಪ್ರಹೃಷ್ಟರಾಗಿ ಸಾಲಂಕೃತರಾಗಿ ಸಂತೃಪ್ತರಾಗಿ ಒಬ್ಬರನ್ನೊಬ್ಬರು ಹಸ್ತಲಾಘವಗಳಿಂದ ಪ್ರಶಂಸಿಸುತ್ತಾ ಪೀಠಗಳನ್ನು ಅಲಂಕರಿಸಿದಮೇಲೆ ನರ್ತಕಿಯೊಬ್ಬಳು ರಂಗಕ್ಕೆ ಬಂದು ಕುಣಿಯಲಾರಂಭಿಸಿದಳು. ಋಷಿಗಳಿಬ್ಬರೂ ಕಾರಣಗಳನ್ನು ಕಲ್ಪಿಸಿಕೊಂಡು ಅಲ್ಲಿಂದೆದ್ದು ಹೊರಗೆ ಹೋದರು.

ಎಲ್ಲೆಲ್ಲಿಗೆ ಹೋದರೂ ನರಳುದನಿಯ ವಿಚಾರವಾಗಿ ಯಾರೊಬ್ಬರೂ ಮಾತಾಡುತ್ತಿರಲಿಲ್ಲ. ಯಾರಿಗೂ ಅದು ಕೇಳಿಸುತ್ತಿದ್ದಂತೆಯೂ ತೋರಲಿಲ್ಲ. ಕೆಲವೆಡೆಗಳಲ್ಲಿ ಸನ್ನಿವೇಶಗಳು ಹೇಗಿದ್ದುವೆಂದರೆ, ಋಷಿಗಳಿಬ್ಬರಿಗೂ ತಾವು ಭೂಮಿಗೆ ಬಂದಿದ್ದ ಉದ್ದೇಶವೇ ಮರೆತುಹೋಗುವಂತಿತ್ತು.

ನಗರದಲ್ಲಿ ಹುಡುಕಿ ಹುಡುಕಿ ಸಾಕಾಗಿ ಅಲ್ಲಿಂದ ಹೊರಗೆ ಹೊರಟರು. ಪಟ್ಟಣದ ಅಟ್ಟಹಾಸದ ಮಹಾನಿನಾದವು ಕಿವಿ ಮರೆಯಾದೊಡನೆ ಆ ಭೀಕರವಾದ ನರಳುದನಿ ಮತ್ತೆ ಸ್ಪಷ್ಟವಾಗಿ ಕೇಳಿಸತೊಡಗಿ, ಅವರಿಬ್ಬರೂ ತಲ್ಲಣಿಸಿದರು. ಮುಂದುವರಿದರು. ಮುಂದುವರಿದಂತೆಲ್ಲ ಅದು ಇನ್ನೂ ಸಮೀಪಗತವಾಯಿತು. ಅರಣ್ಯಪ್ರಾಂತವೂ ಪ್ರಾರಂಭವಾಗಿ ಅದರಲ್ಲಿ ಬಹು ದೂರ ನಡೆದರು. ಅದೂ ನಿರ್ಜನವಾಗಿತ್ತು. ಮನುಷ್ಯವಾಸದ ಗುರುತು ಎಲ್ಲಿಯೂ ಕಾಣಬರಲಿಲ್ಲ. ಬರಬರುತ್ತಾ ಕಾಡು ಇನ್ನೂ ದಟ್ಟವಾಗಿ ಬೆಟ್ಟವೇರಿ ಇಳಿದಿತ್ತು. ಬೆಟ್ಟದ ನೆತ್ತಿಗೆ ಸೇರಿದೊಡನೆ ಕೆಳಗಡೆಯ ಕಣಿವೆಯಿಂದ ಕೇಳಿಬಂದಂತಾಯಿತು

ಆ ಅತ್ಯಂತ ಯಾತನಾಕ್ಲಿಷ್ಟವಾದ ಆರ್ತನಾದ. ಋಷಿಗಳಿಬ್ಬರೂ ಮಹಾ ಭೀತಿಯಿಂದ ಒಬ್ಬರನ್ನೊಬ್ಬರು ಹಿಡಿದುಕೊಂಡು ಕಣಿವೆಗಿಳಿದರು.

ಅಲ್ಲಿದ್ದ ಒಂದು ಸಣ್ಣ ಗದ್ದೆಯ ಕೋಗಿನ ತುದಿಯಲ್ಲಿ ಒಂದು ಹುಲ್ಲುಜೋಪಡಿ ಕಣ್ಣಿಗೆ ಬಿದ್ದಿತು. ಆ ಗುಡಿಸಲಿನಿಂದ ಬರುತ್ತಿತ್ತು— ಸತ್ಯಲೋಕ, ಕೈಲಾಸ, ವೈಕುಂಠಗಳವರೆಗೂ ಏರಿ ವಿಶ್ವವ್ಯಾಪಿಯಾಗಿದ್ದ ಆ ಭಯಂಕರವಾದ ನರಳುದನಿ! ಋಷಿಗಳು ಸಾಮಾನ್ಯ ಮನುಷ್ಯ ವೇಷದಿಂದ ಅಲ್ಲಿಗೆ ನಡೆದರು.

ಗುಡಿಸಲಿನ ಹೊರಗಡೆ ಮನುಷ್ಯರಾರೂ ಕಾಣಿಸಲಿಲ್ಲ. ಬೂದಿ ಗುಡ್ಡೆಯಲ್ಲಿ ಮಲಗಿದ್ದ ಒಂದು ಬಡಕಲು ನಾಯಿ ಮಾತ್ರ ಒಂದೆರಡು ಸೊಲ್ಲು ಕೂಗಿ ದಣಿದು ತಟಸ್ಥವಾಯಿತು. ಒಂದು ಹೇಂಟೆ ತನ್ನ ಹೂಮರಿಗಳೊಡನೆ ಕೊಳಚೆಯಲ್ಲಿ ಕೆಸರು ಕೆದರುತ್ತಿತ್ತು. ಸುತ್ತಲೂ ಅನಂತಾರಣ್ಯಗಳು ಗಗನಚುಂಬಿಗಳಾಗಿದ್ದ ಗಿರಿಶ್ರೇಣಿಗಳನ್ನಡರಿ ಭೀಮವಾಗಿದ್ದು ನೀರವತೆಯನ್ನೂ ಏಕಾಂತತೆಯನ್ನೂ ಹೆಚ್ಚಿಸುತ್ತಿದ್ದವು. ಬಿಸಿಲು ಬೆಂಕಿಮಳೆಗರೆಯುತ್ತಿತ್ತು. ಆ ನೀರವತೆಯಲ್ಲಿ ಒಳಗಣಿಂದ ಕೇಳಿಬರುತ್ತಿದ್ದ ನರಳು ಭೀಷ್ಮವಾಗಿತ್ತು.

ವಿಶ್ವಾಮಿತ್ರನು ಗುಡಿಸಲಿಗೆ ಸುತ್ತುವರಿದಿದ್ದ ತಟ್ಟಿಯ ಗೋಡೆಯ ಕಂಡಿಯಲ್ಲಿ ಇಣಿಕಿ ಒಳಗೆ ನೋಡಿ, ಪರಶುರಾಮನಿಗೂ ಹಾಗೆಯೇ ಮಾಡುವಂತೆ ಸನ್ನೆಮಾಡಿದನು.

ಗುಡಿಸಲಿನ ಒಳಗಡೆ ಮಬ್ಬುಗತ್ತಲೆ ಕವಿದಿತ್ತು. ಸರ್ವತ್ರವೂ ಹೊಗೆ ಹಿಡಿದು ಕರಿಬಲೆ ನೇತುಬಿದ್ದು ಕರ್ರಗಾಗಿತ್ತು. ಹಾರೆ, ಗುದ್ದಲಿ, ಹೆಡಗೆ, ಕುಕ್ಕೆ, ಮಡಕೆ, ನೇಗಿಲು, ಕತ್ತಿ— ಇತ್ಯಾದಿ ಬೇಸಾಯದ ಉಪಕರಣಗಳು ಅಲ್ಲಲ್ಲಿ ಅಸ್ತವ್ಯಸ್ತವಾಗಿ ಚೆದರಿ ಬಿದ್ದಿದ್ದುವು. ನಿರ್ಜೀವವಾದ ಕಸಕಡ್ಡಿಗಳೂ, ಸಜೀವವಾದ ನೊಣಗಳೂ ಸ್ವರಾಜ್ಯ ಸಂಪಾದನೆ ಮಾಡಿದಂತಿತ್ತು. ಮಧ್ಯೆ ಹಾಸಿದ್ದ ಕಂಬಳಿಯ ಮೇಲೆ ಕೊಳೆ ಹಿಡಿದ ಸೊಂಟದ ಪಂಚೆಯ ವಿನಾ ಸಂಪೂರ್ಣವಾಗಿ ನಗ್ನನಾಗಿದ್ದ ರೈತನೊಬ್ಬನು ಅಂಗಾತನೆ ಮಲಗಿ, ಎದೆಯನ್ನು ಎರಡು ಕೈಗಳಿಂದಲೂ ಒತ್ತಿಕೊಳ್ಳುತ್ತಾ ಘೋರವಾಗಿ ನರಳುತ್ತಿದ್ದನು. ಆ ನರಕಯಾತನೆಗೆ ಅವನ

ಕರಿವೊರಡು ಮೈ, ತಲೆ ಮಾತ್ರ ಬಂಡೆಯಡಿ ಸಿಕ್ಕಿದ ಹಾವಿನಂತೆ, ಒದ್ದಾಡಿಕೊಳ್ಳುತ್ತಿತ್ತು. ಋಷಿಗಳಿಬ್ಬರೂ ನೋಡುತ್ತಿದ್ದ ಹಾಗೆಯೇ ಮುದ್ದೆ ಮುದ್ದೆಯಾದ ನೆತ್ತರು ಬುಗ್ಗೆ ಬುಗ್ಗೆಯಾಗಿ ಚಿಮ್ಮಿ ಅವನ ಬಾಯಿಂದ ಕೆಂಪಗೆ ಹೊರಬಿದ್ದು ನೆಲವನ್ನು ತೊಯ್ಸಿತು! ಆ ರೈತನ ಪಕ್ಕದಲ್ಲಿ ಚಿಂದಿ ಚಿಂದಿಯಾದ ಕೊಳಕಲು ಸೀರೆಯನ್ನು ಮಾನ ಮುಚ್ಚಿಕೊಳ್ಳುವಷ್ಟರ ಮಟ್ಟಿಗೆ ಉಟ್ಟುಕೊಂಡು, ಬಡಕಲಾಗಿದ್ದ ಅವನ ಹೆಂಡತಿ ತಲೆಯಮೇಲೆ ಕೈಹೊತ್ತು ಕುಳಿತು ಕಣ್ಣೀರು ಸುರಿಸುತ್ತಿದ್ದಳು. ಆ ಹೆಂಗಸಿನ ಹಿಂದೆ ಕೂದಲು ಕೆದರಿ ವಿಕಾರವಾಗಿದ್ದ ಬತ್ತಲೆಯಾಗಿ ಹೊಟ್ಟೆ ಡೊಳ್ಳಾಗಿ ಮೈ ಸಣಕಲಾಗಿದ್ದ ನಾಲ್ಕೈದು ವರ್ಷದ ಹುಡುಗಿಯೊಬ್ಬಳು ನೆಲದಮೇಲೆ ಒರಗಿ ಮೂರ್ಛೆ ಹೋಗಿರುವಂತೆ ನಿದ್ದೆ ಮಾಡುತ್ತಿದ್ದಳು.

ಋಷಿಗಳಿಬ್ಬರಿಗೂ ಎದೆ ಬೆಂದು, ಕಣ್ಣುಗಳಿಂದ ಬಿಸಿಯಾದ ನೀರು ಹರಿಯತೊಡಗಿತು.— ಆ ಮಹಾನಗರದಲ್ಲಿ ತಾವು ನೋಡಿದ್ದ ಭೋಗದ ದೃಶ್ಯಗಳನ್ನು ನೆನೆದಾಗಲಂತೂ, ಮುನಿಸೂ ಮನದಲ್ಲಿ ಕಿಡಿಯಾಡಿತು. ಬೇಗನೆ ತಟ್ಟಿಯ ಬಾಗಿಲನ್ನು ಮೆಲ್ಲನೆ ದಬ್ಬಿ, ತೆರೆದು, ನಿಲವಿಗೆ ತಲೆ ತಾಗದಂತೆ ಬಗ್ಗಿ, ಒಳಗೆ ದಾಟಿದರು.

ಅವರಿಬ್ಬರೂ ಸಾಮಾನ್ಯ ಮಾನವ ವೇಷಧಾರಿಗಳಾಗಿದ್ದರೂ ರೈತನ ಹೆಂಡತಿ ಅವರನ್ನು ಕಂಡೊಡನೆ ಚೀತ್ಕಾರಮಾಡಿ, ಕೈ ಜೋಡಿಸಿಕೊಂಡು "ದಮ್ಮಯ್ಯ, ನಿಮ್ಮ ಕಾಲಿಗೆ ಬೀಳ್ತೀನಿ. ಈಗ ದುಡ್ಡಿಲ್ಲ, ನನ್ನ ಗಂಡಗೆ ಕಾಯಿಲೆ ಗುಣವಾದ ಕೂಡಲೆ ಸಾಲಮಾಡಿಯಾದರೂ ತಂದುಕೊಡ್ತಾರೆ! ಕೂಸನ್ನು ನೋಡಿಯಾದರೂ ಕನಿಕರ ತೋರಿಸಿ!" ಎಂದು ರೋದಿಸ ತೊಡಗಿದಳು.

ತಾವು ಕಂದಾಯಕ್ಕೆ ಬಂದ ಸರಕಾರಿಯ ಅಧಿಕಾರಿಗಳೂ ಅಲ್ಲ, ಪುರಾಣರೂ ಅಲ್ಲ, ಸಾಹುಕಾರನ ವಸೂಲಿಯ ಸಾಬರೂ ಅಲ್ಲ, ಪರದೇಶದ ಪ್ರಯಾಣಿಕರು, ಎಂದು ಕಷ್ಟಪಟ್ಟು ತಿಳಿಸಿದಮೇಲೆ, ಆ ಹೆಂಗಸು ಋಷಿಗಳ ಪಾದಕ್ಕೆ ಬಿದ್ದು ತನ್ನ ಕಷ್ಟವನ್ನು ಹೇಳಿಕೊಂಡಳು.

"ಏನು ಕಾಯಿಲೆ ನಿನ್ನ ಗಂಡನಿಗೆ?"

"ಏನು ಕಾಯಿಲೆಯೋ ಆ ಭಗವಂತನಿಗೇ ಗೊತ್ತು."

"ಎಷ್ಟು ದಿನಗಳಿಂದ?"

"ಬಹಳ ಕಾಲದಿಂದಲೂ ಇದೆ. ಒಂದುಸಾರಿ ಕಡಮೆಯಾದರೆ ಮತ್ತೊಂದುಸಾರಿ ಹೆಚ್ಚಾಗುತ್ತದೆ. ಯಾರಿಗೆ ತೋರಿಸಿದರೂ ಇಂಥಾ ಕಾಯಿಲೆಯೆಂದು ಅರ್ಥವಾಗುವುದಿಲ್ಲ. ಇದ್ದಕ್ಕಿದ್ದಹಾಗೆ ಎದೆಯಮೇಲೆ ಯಾರೋ ಕೂತುಕೊಂಡಂತೆ ಆಗಿ ಭಾರ ಹೆಚ್ಚುತ್ತದೆ. ಕೀಲು ಕೀಲುಗಳಲ್ಲಿ ಕಬ್ಬಿಣ ಕಾಸಿ ಹೊಯ್ದಂತೆ ನೋವು ಪ್ರಾರಂಭವಾಗುತ್ತದೆ. ಆಗಾಗ್ಗೆ ಹೆಂಟಿ ಹೆಂಟಿಯಾಗಿ ರಕ್ತ ಕಾರುತ್ತದೆ. ವೈದ್ಯರಾಯಿತು, ಜೋಯಿಸರಾಯಿತು; ದೇವರಾಯಿತು, ದಿಂಡರಾಯಿತು. ಸ್ವಾಮಿ, ಭಗವಂತನು ಕೂಡಾ ನಮ್ಮನ್ನು ಕೈ ಬಿಟ್ಟಿದ್ದಾನೆ! ಅವನ ಕಿವಿಯೂ ಕಿವುಡಾಯಿತೆ? ಅವನ ಕಣ್ಣೂ ಕುರುಡಾಯಿತೆ?" ಎಂದು ಹೆಂಗಸು ಬಿಕ್ಕಿ ಬಿಕ್ಕಿ ಅತ್ತಳು!

"ಇಲ್ಲ, ಭಗವಂತನು ಕೈ ಬಿಟ್ಟಿಲ್ಲ. ಸಮಾಧಾನಮಾಡಿಕೊ. ನಮ್ಮ ಕೈಲಾದುದನ್ನು ಮಾಡುತ್ತೇವೆ" ಎಂದು ಋಷಿಗಳಿಬ್ಬರೂ ರೋಗಿಯನ್ನು ಪರೀಕ್ಷಿಸಿದರು.

ಹೃದಯ, ಶ್ವಾಸಕೋಶ, ಜಠರ, ಕರುಳು, ಮಿದುಳು—ಮೊದಲಾದ ಸರ್ವಾವಯವಗಳನ್ನೂ ಚೆನ್ನಾಗಿ ಪರೀಕ್ಷಿಸಿದರು. ಎಲ್ಲಿಯೂ ಒಂದು ತಿಲಮಾತ್ರವಾದರೂ ದೋಷವಾಗಲಿ ರೋಗದ ಕಾರಣ ಚಿಹ್ನೆಯಾಗಲಿ ಗೋಚರಿಸಲಿಲ್ಲ. ರೋಗಿ ಯಾವ ಪ್ರಶ್ನೆಗೂ ಉತ್ತರ ಕೊಡುವ ಸ್ಥಿತಿಯಲ್ಲಿರಲಿಲ್ಲ. ಎದೆಯಮೇಲೆ ಕೈಯಿಟ್ಟಾಗ ಮಾತ್ರ ಹುಣ್ಣು ಮುಟ್ಟಿದಂತೆ ಮುಖವನ್ನು ಸಿಂಡರಿಸಿ ಮತ್ತೂ ಹೆಚ್ಚಾಗಿ ನರಳುತ್ತಿದ್ದನು.

ಋಷಿಗಳು ಕಂಗಾಲಾದರು. ಬ್ರಹ್ಮವಿದ್ಯೆಗಿಂತಲೂ ಅತಿ ರಹಸ್ಯ ವಾಗಿತ್ತು ಆ ರೈತನ ಕಾಯಿಲೆ! ಏನಾದರಾಗಲಿ ಎಂದು, ಅಲ್ಲಿಗೆ ಹತ್ತಿರ ವಾಗಿದ್ದ ಒಂದು ಊರಿನಿಂದ ಸರಕಾರಿಯ ಡಾಕ್ಟರನ್ನು ಕರೆತಂದರು. ಅವನು ಮೋಟಾರುಗಾಡಿ ಹೋಗದ ಹಳ್ಳಿಗೆ ಖಂಡಿತ ಬರಲಾಗುವುದಿಲ್ಲ ಎಂದಿದ್ದರೂ ಋಷಿಯ ಕೈಯಲ್ಲಿದ್ದ ಚಿನ್ನದ ನಾಣ್ಯಗಳನ್ನು ಕಂಡಮೇಲೆ ಮೂಗುದಾರ ಹಾಕಿದ ಗೂಳಿ ತಂಟಿ ಮಾಡದೆ ಹಿಂಬಾಲಿಸುವಂತೆ ಬಂದುಬಿಟ್ಟನು.

ಆದರೆ ಅವನು ರೋಗಿಯ ಬಳಿಗೆ ಬಂದೊಡನೆಯೇ ರೋಗಿಗೆ ಎದೆ ಭಾರ ಹೆಚ್ಚಿ ನರಳುವುದೂ ನೆತ್ತರು ಕಾರುವುದೂ ಹೆಚ್ಚಾಯಿತು. ಡಾಕ್ಟರು ಬೇಗಬೇಗ ಪರೀಕ್ಷೆ ನಡೆಸಿ, ರೋಗದ ಲಕ್ಷಣ ತನಗೇನೂ ಗೊತ್ತಾಗದಿದ್ದರೂ ದೊಡ್ಡದೊಂದು ಲ್ಯಾಟಿನ್ ಹೆಸರನ್ನು ಹೇಳಿ, ಬಣ್ಣದ ನೀರನ್ನು ಔಷಧಿಯಾಗಿ ಕೊಟ್ಟು ಹೋದನು. ಅವನು ದೂರದೂರ ಹೋದ ಹಾಗೆಲ್ಲಾ ರೋಗಿ ಮೊದಲಿದ್ದ ಸ್ಥಿತಿಗೆ ಬಂದನು.

ಆ ಹೆಂಗಸಿಗೆ ಡಾಕ್ಟರಲ್ಲಿ ಸ್ವಲ್ಪವೂ ನಂಬುಗೆ ಇರಲಿಲ್ಲ. ಪುರೋಹಿತರನ್ನು ಕರೆಯಿಸಬೇಕೆಂದು ಸೂಚಿಸಿದಳು. ಏಕೆಂದರೆ, ಯಾವುದೋ ರಣಪಿಶಾಚಿಯ ಚೇಷ್ಟೆಯೇ ಗಂಡನ ರೋಗಕ್ಕೆ ಕಾರಣವೆಂದು ಆಕೆ ನಿಸ್ಸಂದೇಹವಾಗಿ ನಂಬಿದ್ದಳು.

ವಿಶ್ವಾಮಿತ್ರನು ಒಪ್ಪದಿದ್ದರೂ ಪರಶುರಾಮನು, "ನೋಡಿ ಬಿಡೋಣ" ಎಂದು ಭಟ್ಟರನ್ನೂ ಕರೆಸಿದನು. ಅವನಿಗೂ ರೋಗಕ್ಕೆ ಕಾರಣ ಸ್ವಲ್ಪವೂ ತಿಳಿಯದಿದ್ದರೂ ಒಂದು ಪಿಶಾಚಿಯ ಹೆಸರನ್ನು ಹೇಳಿ, ಅದಕ್ಕೆ ಮಾಯಾಮಂತ್ರ ಮಾಡಿ ತಡೆಗಟ್ಟಿದ್ದೇನೆ, ಎಂದು ಹೇಳಿ, ಚಿನ್ನದ ನಾಣ್ಯಗಳನ್ನು ದಕ್ಷಿಣೆ ತೆಗೆದುಕೊಂಡು ತೃಪ್ತನಾಗಿ ಹೋದನು.

ವಿಶ್ವಾಮಿತ್ರನು ಪರಶುರಾಮನನ್ನು ಕುರಿತು "ಈ ಪುರೋಹಿತರ ಗುಂಪೆಲ್ಲವೂ ಒಂದೇ! ಸುಲಿಗೆ! ಸುಲಿಗೆ!! ಸುಲಿಗೆ!!! ಹಿಂದೆ ಆ ವಸಿಷ್ಠ ಸುಲಿದಹಾಗೆಯೇ ಇಂದು ಈ ಭಟ್ಟನೂ ಸುಲಿಯುತ್ತಿದ್ದಾನೆ! ಅವನಂತೂ ರಘುವಂಶಕ್ಕೆ ಶನಿ ಹಿಡಿದ ಹಾಗೆ ಹಿಡಿದುಬಿಟ್ಟಿದ್ದ! ಇಕ್ಷ್ವಾಕು, ರಘು, ದಿಲೀಪ, ದಶರಥ, ರಾಮ—ಎಲ್ಲರನ್ನೂ ಜೀವಹಿಂಡಿಬಿಟ್ಟ ಪೌರೋಹಿತ್ಯ ಮಾಡಿ!........ನಾನು ಹೇಳಲಿಲ್ಲವೇ ನಿನಗೆ ಪುರೋಹಿತರನ್ನು ಕರೆಸುವುದು ಬೇಡಾ ಎಂದು" ಎಂದು ಹೇಳಿದನು.

ಋಷಿಗಳಿಬ್ಬರೂ ಆ ಗುಡಿಸಲಲ್ಲಿಯೇ ಇದ್ದುಕೊಂಡು ರೈತನ ರಹಸ್ಯ ರೋಗಕ್ಕೆ ಕಾರಣವನ್ನೂ ಔಷಧಿಯನ್ನೂ ಕಂಡುಹಿಡಿಯಲು ಪ್ರಯತ್ನಿಸಿದರು. ಎಲ್ಲ ನಿಷ್ಫಲವಾಯಿತು.

ಚಿನ್ನದ ನಾಣ್ಯಗಳನ್ನು ಯಥೇಚ್ಛವಾಗಿ ನೀಡುವವರು ಆ ಗುಡಿಸಲಿನಲ್ಲಿ ಇಳಿದುಕೊಂಡಿದ್ದಾರೆ ಎಂಬ ಸುದ್ದಿ ಹಬ್ಬಿದಮೇಲೆ, ಸುತ್ತಮುತ್ತಲಿದ್ದ ಊರಿನವರಿಗೂ ಅಧಿಕಾರಿಗಳಿಗೂ ರೈತನ ಯೋಗಕ್ಷೇಮದ ಚಿಂತೆ ಹೆಚ್ಚಾಗಿ, ಅದುವರೆಗೆ ಅಲ್ಲಿಗೆ ಕಾಲಿಡದಿದ್ದವರೆಲ್ಲರೂ ಬಂದು ಬಂದು ವಿಚಾರಿಸಿಕೊಂಡು ಹೋಗತೊಡಗಿದರು.

ಅಧಿಕಾರಿಗಳು ಬಂದಾಗಲೂ, ಡಾಕ್ಟರೂ ಪುರೋಹಿತರೂ ಬಂದಾಗ ಆಗಿದ್ದಂತೆ, ರೈತನ ಎದೆನೋವು ಇಮ್ಮಡಿಯಾಗುತ್ತಿತ್ತು.

ಕೆಲವು ದಿನಗಳಾದಮೇಲೆ ಒಂದು ದಿನ ಈ ವಿಚಾರವು ಧ್ಯಾನ ಮಾಡುತ್ತಿದ್ದ ವಿಶ್ವಾಮಿತ್ರನಿಗೆ ಹೊಳೆಯಿತು! ಆ ರೋಗದ ರಹಸ್ಯವನ್ನು ತಿಳಿಯುವುದಕ್ಕೆ ದೇವವೈದ್ಯನಾದ ಧನ್ವಂತರಿಯೊಬ್ಬನಿಗೇ ಸಾಧ್ಯವೆಂದು. ಆ ಸೂಚನೆ ಪರಶುರಾಮನಿಗೂ ಸಮ್ಮತವಾಗಿ, ಧನ್ವಂತರಿಗೆ ಹೇಳಿಕಳುಹಿಸಿದರು. ಧನ್ವಂತರಿ ಸಾಮಾನ್ಯ ವೈದ್ಯನ ವೇಷಧಾರಣೆಮಾಡಿ ಶೀಘ್ರವಾಗಿ ಅಲ್ಲಿಗೆ ಬಂದನು.

ರೈತನ ಎದೆನೋವಿನ ಗೋಳನ್ನು ನೋಡಿ, ನೆತ್ತರು ಹೆಪ್ಪುಗಡಿಸುವ ಆ ನರಳುದನಿಯನ್ನು ಕೇಳಿ ಕಕ್ಕಾಬಿಕ್ಕಿಯಾದನು. ಆದರೂ ಉತ್ತರಕ್ಷಣದಲ್ಲಿ ತಾನು ವೈದ್ಯನೆಂಬುದನ್ನು ನೆನಪಿಗೆ ತಂದುಕೊಂಡು ಧೈರ್ಯ ತಾಳಿ ರೋಗಿಯ ದೇಹಪರೀಕ್ಷೆಗೆ ಕೈಯಿಟ್ಟನು.

ವಿಶ್ವಾಮಿತ್ರ ಪರಶುರಾಮರೂ ರೈತನ ಹೆಂಡತಿಯಂತೆಯೆ ಕಾತರ ಹೃದಯರಾಗಿ ತುಟಿವೆರೆಯದೆ ನಿಂತು ನೋಡುತ್ತಿದ್ದರು! ರೋಗಿಯ ನರಳುಗಳ ನಡುವೆ ಆ ನಿರೀಕ್ಷೆಯ ನಿಶ್ಶಬ್ದದಲ್ಲಿ ಅವರು ಉಸಿರಾಡುವುದೂ ಕೇಳಿಸುತ್ತಿತ್ತು.

ಬಹಳ ಕಾಲ ಪರೀಕ್ಷೆ ನಡೆಸಿದ ತರುವಾಯ ಧನ್ವಂತರಿ ಋಷಿಗಳ ಕಡೆಗೆ ವ್ಯಂಗ್ಯಪೂರ್ಣವಾಗಿ ದೃಷ್ಟಿಸಿದನು. ರೈತನ ಹೆಂಡತಿ ಆ ದೃಷ್ಟಿಯಲ್ಲಿದ್ದ ನಿರಾಶೆಯನ್ನು ಕಂಡು ನೀರವವಾಗಿ ಅಳಲಾರಂಭಿಸಿದಳು.

ರೈತನ ಹೆಂಡತಿಯ ದೃಷ್ಟಿಗೆ ಮಾತ್ರ ಧನ್ವಂತರಿ ನೋಡುತ್ತಿದ್ದಹಾಗೆ ಕಾಣಿಸುತ್ತಿದ್ದಿತೆ ಹೊರತು ನಿಜವಾಗಿಯೂ ದೇವವೈದ್ಯನೂ ಋಷಿಗಳೂ ಸಂಭಾಷಿಸುತ್ತಿದ್ದರು.

ಧನ್ವಂತರಿ ಹೇಳಿದನು "ಇದು ದೈಹಿಕ ರೋಗವಲ್ಲ".

ಪರಶುರಾಮನು "ಆತ್ಮದ್ದೇನು?" ಎಂದು ಕೇಳಿದನು.

ಧನ್ವಂತರಿ ತಲೆಯಲ್ಲಾಡಿಸಿ 'ಅದೂ ಅಲ್ಲ' ಎಂಬುದಾಗಿ ಸೂಚಿಸಿದನು.

"ಹಾಗಾದರೆ?" ಎಂದು ವಿಶ್ವಾಮಿತ್ರನು ಬೆರಗಾದನು.

ಧನ್ವಂತರಿ ಹೇಳಿದನು: "ದೇಹದ ರೋಗವಾಗಿದ್ದರೆ ದೇಹದಲ್ಲಿ ಇರಬೇಕಾಗಿತ್ತು. ಆದರೆ ನಾನು ಚೆನ್ನಾಗಿ ಪರೀಕ್ಷಿಸಿದ್ದೇನೆ; ಅಲ್ಲಿ ಎಲ್ಲಿಯೂ ಇಲ್ಲ. ಆತ್ಮದ್ದಾಗಿದ್ದರೆ ಪಾಪರೂಪದಿಂದ ತೋರಬೇಕಾಗಿತ್ತು. ಆದರೆ ಈ ಸರಳ ಸಾಮಾನ್ಯ ಜೀವನದ ರೈತನಿಗೆ ಆ ರೋಗ ಇನ್ನೂ ತಗುಲಿಲ್ಲ. ಆದ್ದರಿಂದ" ಎಂದು ಹೇಳುತ್ತಾ ಜೇಬಿನಿಂದ ಒಂದು ದಿವ್ಯ ಯಂತ್ರವನ್ನು ಹೊರಕ್ಕೆ ತೆಗೆದು ತೋರಿ (ಅದೂ ರೈತನ ಹೆಂಡತಿಯ ದೃಷ್ಟಿಗೆ ಅಗೋಚರವಾಗಿತ್ತು) "ಇದರಿಂದ ನೋಡಿದರೆ ರಹಸ್ಯವೇನಿದ್ದರೂ ಗೊತ್ತಾಗುತ್ತದೆ" ಎಂದು ರೋಗಿಗೆ ತುಸು ದೂರವಾಗಿ ನಿಂತು ಆ ದಿವ್ಯ ಯಂತ್ರದ ಮುಖಾಂತರ ಸಮೀಕ್ಷಿಸಲಾರಂಭಿಸಿದನು.

ವಿಶ್ವಾಮಿತ್ರ ಪರಶುರಾಮರು ನಿಂತು ನೋಡುತ್ತಿದ್ದಹಾಗೆಯೇ ದಿವ್ಯ ಯಂತ್ರದಲ್ಲಿ ಕಣ್ಣಿಟ್ಟು ನೋಡುತ್ತಿದ್ದ ಧನ್ವಂತರಿಯ ವದನವು ಕೆಂಪೇರಿತು. ವಕ್ಷಸ್ಥಲವು ಉಸುರಿನ ಜೋರಾಟದಿಂದ ಮೇಲಕ್ಕೂ ಕೆಳಕ್ಕೂ ಹಾರತೊಡಗಿತು. ಕಣ್ಣುಗಳಿಂದ ನೀರು ಉಕ್ಕಿ ಹನಿ ಹನಿಯಾಗಿ ಕೆನ್ನೆಗಳಮೇಲೆ ಉರುಳಿ ನೆಲಕ್ಕೆ ಬಿದ್ದು ಹೀರಿಹೋದುವು.

"ಅಯ್ಯೋ ಪಾಪಿಗಳೇ!" ಎಂದು ಧನ್ವಂತರಿ ಆನೆ ಘೀಳಿಡುವಂತೆ ಕೂಗಿದನು. ಆದರೆ ಮನುಷ್ಯಮಾತ್ರಳಾಗಿದ್ದ ರೈತನ ಹೆಂಡತಿಗೆ ಅವನು ಕೆಮ್ಮಿದಂತೆ ಮಾತ್ರ ಕೇಳಿಸಿತ್ತು!

ಋಷಿಗಳಿಬ್ಬರೂ ಬೆಚ್ಚಿಬಿದ್ದು "ಏನು? ಏನು? ಏನಾಯ್ತು? ಏನಾಯ್ತು?" ಎಂದು ಧನ್ವಂತರಿಯ ಬಳಿಗೆ ಓಡಿದರು.

ಧನ್ವಂತರಿಯು ಮಾತಾಡದೆ ಯಂತ್ರವನ್ನು ಋಷಿಗಳ ಕಡೆಗೆ ನೀಡಿದನು. ಋಷಿಗಳಿಬ್ಬರೂ ಯಂತ್ರದಲ್ಲಿ ಕಣ್ಣಿಟ್ಟು ನೋಡತೊಡಗಿದರು: ನೋಡಿ ಬೆಚ್ಚಿಬಿದ್ದರು!

ರೈತನ ಎದೆಯಮೇಲೆ ಸಮಸ್ತ ಚಕ್ರಾಧಿಪತ್ಯವೂ ಮಹಾಪರ್ವತಾಕಾರವಾಗಿ ನಿಂತಿತ್ತು. ಋಷಿಗಳು ನೋಡಿಕೊಂಡು ಬಂದಿದ್ದ ಆ ಮುಖ್ಯ ಪಟ್ಟಣವು ಅದರ ನೆತ್ತಿಯಲ್ಲಿ ರಾಜಿಸುತ್ತಿದೆ! ಅಲ್ಲಿಯ ದೇವಾಲಯಗಳೂ ವಿದ್ಯಾನಿಲಯಗಳೂ ಕ್ರೀಡಾಮಂದಿರಗಳೂ ಪ್ರಮೋದವನಗಳೂ ಕರ್ಮಸೌಧಗಳೂ ಕಾರ್ಖಾನೆಗಳೂ ರಾಜಪ್ರಾಸಾದಗಳೂ ತಮ್ಮ ಭಾರವನ್ನೆಲ್ಲಾ ರೈತನ ಎದೆಯಮೇಲೆ ಹಾಕಿ, ಸಂಸ್ಕೃತಿ ಮತ್ತು ನಾಗರಿಕತೆ ಎಂಬ ಕೀರ್ತಿಯಿಂದ ಮೆರೆಯುತ್ತಿವೆ!

"ಅಯ್ಯೋ, ಅಯ್ಯೋ, ಅಯ್ಯೋ! ಅವನು ಇದುವರೆಗೆ ಸಾಯದೆ ಬದುಕಿದ್ದುದೆ ಹೆಚ್ಚಳವಪ್ಪ! ಮಂದರಪರ್ವತವನ್ನು ಹೊತ್ತ ಕೃಷ್ಣನು ಕೂಡ ನುಚ್ಚುನೂರಾಗುತ್ತಿದ್ದನಲ್ಲಾ ಈ ರಾಜ್ಯದ ಭಾರ ಅವನ ಎದೆಯ ಮೇಲೆ ಬಿದ್ದಿದ್ದರೆ!" ಎಂದು ಪರಶುರಾಮನು ಕೂಗಿಕೊಂಡನು.

ವಿಶ್ವಾಮಿತ್ರನು ರೋಷದಿಂದ ಹಲ್ಲುಕಡಿಯುತ್ತಾ "ಜಾಮದಗ್ನಿ, ನೀನಂದು ಆಳುವವರನ್ನೆಲ್ಲಾ ನಿರ್ನಾಮಮಾಡಿ, ಸಮತಾಪ್ರಚಾರಕ್ಕೆ ಜೀವಮಾನವನ್ನೆಲ್ಲ ತೆತ್ತುದು ವ್ಯರ್ಥವಾಯಿತು!" ಎಂದನು.

"ನೀನು ಕೂಡಾ ಮೇಲುಕೀಳುಗಳೆಂಬ ಭೇದವನ್ನು ತೊಡೆದು ಹಾಕಲು ಬಾಳನ್ನೇ ತೇಯಲಿಲ್ಲವೆ? ಅದೂ ವ್ಯರ್ಥವಾಗಿದೆಯಲ್ಲಾ ನೋಡು!" ಎಂದು ಪರಶುರಾಮನು ಧನ್ವಂತರಿಯ ಕಡೆಗೆ ನೋಡಿ, "ಬೇಗ ಹೇಳು, ಧನ್ವಂತರಿ, ಏನು ಮಾಡಿದರೆ ಈ ರೈತನು ಬದುಕುತ್ತಾನೆ?" ಎಂದನು.

"ಎದೆಯ ಮೇಲಿರುವ ರಾಜ್ಯದ ಭಾರವನ್ನು ತೆಗೆದುಹಾಕಿದರೆ ಕಾಯಿಲೆ ಸರಿಹೋಗುತ್ತದೆ" ಎಂದನು ಧನ್ವಂತರಿ.

"ಲೋಕವೆಲ್ಲ ನಿರ್ನಿಯಮವಾಗಿ ಅರಾಜಕವಾಗಿ ಅವ್ಯವಸ್ಥೆಯಾದರೆ?"

ಧನ್ವಂತರಿ ಸ್ವಲ್ಪ ಮುನಿದು ಕಣ್ಣು ಕೆಂಪಗೆ ಮಾಡಿ, "ನಿಮಗೆ ಬುದ್ಧಿಯಿಲ್ಲ! ಮೊದಲು ರೋಗ ನಿವಾರಣೆಯಾಗಲಿ! ಆಮೇಲೆ ದೃಢಕಾಯನಾಗುವ ಅವನೇ ಕೆಳಕ್ಕೆ ಬಿದ್ದ ರಾಜ್ಯದ ಭಾರವನ್ನು ಎದೆಯ

ಮೇಲೆ ಹಾಕಿಸಿಕೊಳ್ಳುವುದಕ್ಕೆ ಬದಲಾಗಿ, ಹೆಗಲಮೇಲೆ ಹೊತ್ತು, ರಾಜ್ಯ ಭಾರವನ್ನು ವಹಿಸಿ ನಿರ್ವಹಿಸುತ್ತಾನೆ!'' ಎಂದು ಗದರಿಸಿದನು.

ಒಡನೆಯೆ ವಿಶ್ವಾಮಿತ್ರನು ಗೂಳಿಯಂತೆ ಹೂಂಕರಿಸಿದನು. ಆ ಹೂಂಕಾರದಿಂದ ಮಹಾಭಯಂಕರವಾಗಿದ್ದ ಕ್ರಾಂತಿಭೂತಗಳು ಮೈದೋರಿ ನಿಂತು ತಲೆಬಾಗಿ ಕೈಮುಗಿದು ಬೆಸನೇನೆಂದು ಬೇಡಿದುವು.

"ಹೋಗಿ, ಆ ರೈತನ ಎದೆಯ ಮೇಲಿರುವ ಭಾರವನ್ನೆಲ್ಲಾ ನೆಲಕ್ಕುರುಳಿಸಿ'' ಎಂದು ಗರ್ಜಿಸಿ ಕೈ ಬೀಸಿದನು.

ಒಡನೆಯೆ ರಾಜ್ಯದಲ್ಲಿ ಸಿಡಿಲು ಮಳೆ ಬಿರುಗಾಳಿ ಭೂಕಂಪಗಳು ತೋರಿ ಉತ್ಪಾತವಾಯಿತು. ನೋಡುತ್ತಿದ್ದಂತೆ: ರಾಜವೇಶ್ಮವು ಉರುಳಿತು; ದೇವಾಲಯದ ಗೋಪುರಗಳೂ ಮಹಾರವದಿಂದ ಕೆಳಗೆ ಬಿದ್ದುವು......

.............ರೈತನ ನರಳುವಿಕೆ ಕ್ರಮೇಣ ಕಡಿಮೆಯಾಗುವಂತೆ ತೋರಿತು. ಶ್ವಾಸೋಚ್ಛ್ವಾಸ ಸಹಜವಾಗತೊಡಗಿತು. ಕಣ್ಣಿನಲ್ಲಿ ಸಂತೋಷದ ಬೆಳಕೂ ಮಿಂಚಿತು.....ಮತ್ತೆ......ತುಸು ಹೊತ್ತಿನಲ್ಲಿಯೆ, ನೋಡುತ್ತಿದ್ದವರಿಗೆ ಆಶ್ಚರ್ಯವಾಗುವಂತೆ, ನಗುಮೊಗವಾಗಿ ಮೇಲೆದ್ದು ನಿಂತು, ಋಷಿಗಳಿಗೆ ಕೈ ಮುಗಿದನು.

# ವೈರಾಗ್ಯದ ಮಹಿಮೆ

ಅಥವಾ

## "ಅಟ್ಟಿದರೆ ಓಡುತ್ತದೆ; ಬಿಟ್ಟರೆ ಹಿಂಬಾಲಿಸುತ್ತದೆ"

ಹರಪುರ ಗ್ರಾಮದ ರಾಯಚರಣನಿಗೆ ಸುಖಪಡಬೇಕೆಂಬ ಆಸೆ ಯಥೇಚ್ಛವಾಗಿದ್ದರೂ ಅದಕ್ಕೆ ತಕ್ಕ ಉಪಪತ್ತಿಯು ಅನುಕೂಲವಿರಲಿಲ್ಲ. ಹುಟ್ಟು ಸೋಮಾರಿಯಾಗಿದ್ದ ಆತನಿಗೆ ಕೆಲಸದಲ್ಲಿ ಸಂಪೂರ್ಣ ಅನಾಸಕ್ತಿ ಯೋಗವಿದ್ದುದರಿಂದ ಅವನಿಗೂ ಸಂಪತ್ತಿಗೂ ಎಣ್ಣೆಸೀಗೆಯ ನೆಂಟಸ್ತಿಗೆ ಯಿತ್ತು. ತಂದೆತಾಯಿಗಳು ಚಿಕ್ಕಂದಿನಲ್ಲಿಯೇ ವೈಕುಂಠವಾಸಿಗಳೋ ಕೈಲಾಸವಾಸಿಗಳೋ ಆಗಿದ್ದುದರಿಂದ ಆ ಎರಡು ದಿವ್ಯ ಸ್ಥಾನಗಳ ಸುಖವೂ ಅವನಿಗೆ ಇಲ್ಲಿ, ಈ ಪಾರ್ಥಿವ ಪ್ರಪಂಚದಲ್ಲಿ, ವಜಾ ಆಗಿ ಹೋಗಿತ್ತು. ದೂರದ ಬಂಧುಗಳ ಮನೆಗಳಲ್ಲಿ (ಹತ್ತಿರದ ನೆಂಟರು ಸೇರಿಸುತ್ತಿರಲಿಲ್ಲ) ಅವರಿವರ ಕನಿಕರದ ಕೂಳುಂಡು ದೊಡ್ಡವನಾದನು. ದೊಡ್ಡವನಾದ ಮೇಲೆಯೂ ಬಿಟ್ಟಿ ಕೂಳು ತಿನ್ನುವ ವಿಚಾರದಲ್ಲಿ ಅವನ ಅಭಿಪ್ರಾಯ ಭಿನ್ನವಾಗಲಿಲ್ಲ. ಆದರೆ ಕೂಳಿಕ್ಕುತ್ತಿದ್ದವರ ಅಭಿಪ್ರಾಯ ಭಿನ್ನವಾಯಿತು.

ಹುಡುಗನಾಗಿದ್ದಾಗ, ಏನೋ ಪಾಪ ತಂದೆತಾಯಿಗಳಿಲ್ಲ ಎಂದು ಅನ್ನ ಹಾಕಿದ್ದಕ್ಕೆ ದೊಡ್ಡವನಾದ ಮೇಲೆಯೂ ಸ್ವತಃ ದುಡಿದು ತಿನ್ನದೆ ಇನ್ನೊಬ್ಬರ ಕೈ ಹಾರೈಸಿದರೆ ಯಾರಿಗೆ ತಾನೇ ಸಹಿಸಲಾಗುತ್ತದೆ. ರಾಯಚರಣನಿಗೆ ಒಂದೊಂದು ಮನೆಯಿಂದಲೂ ಅರ್ಧಚಂದ್ರಪ್ರಯೋಗ ವಾಯಿತು. ಅವನಿಗೆ ರೇಗಿತು: ಬಹು ಕಾಲದಿಂದ ನಡೆದುಕೊಂಡು ಬಂದಿದ್ದ ಮಾಮೂಲು ಹಕ್ಕನ್ನು ತಿರಸ್ಕರಿಸುತ್ತಿದ್ದಾರಲ್ಲಾ ಎಂದು.

ಬಿಟ್ಟಿ ಕೂಳು ಸಿಕ್ಕುವುದು ಬಹು ಪ್ರಯಾಸಕರವಾಗಿ ಒಂದು ದಿನ

ಉಪವಾಸವನ್ನು ಅನುಭವಿಸಿದ ಮೇಲೆಯೇ ರಾಯಚರಣನಿಗೆ ತಾನೂ ನಾಲ್ಕು ಕಾಸು ಸಂಪಾದನೆ ಮಾಡಿ ಇತರರಿಗೆ ಸಮನಾಗಿ ಸುಖಪಡುತ್ತ ಅವರನ್ನು ಮೂದಲಿಸಬೇಕೆಂಬ ಮನಸ್ಸು ಹುಟ್ಟಿದ್ದು. ಆದರೆ ಅದೂ ಸಾರ್ಥಕವಾಗಲಿಲ್ಲ. ಸೋಮಾರಿತನ ರಕ್ತಗತವಾಗಿದ್ದ ಆತನಿಗೆ ಕೆಲಸ ಮಾಡುವುದೆಂದರೆ ಇತರರ ಮೂಗಿನ ಸಿಂಬಳ ತೆಗೆಯುವುದಕ್ಕಿಂತಲೂ ಹೆಚ್ಚು ಜುಗುಪ್ಸೆಯಾಗುತ್ತಿತ್ತು. ಸೋಮಾರಿತನವೇ ವೃತ್ತಿಯಾಗುವಂತಹ ಒಂದು ಜೀವನ ಮಾರ್ಗವಿದ್ದಿದ್ದರೆ ನಾನು ಕೋಟ್ಯಾಧೀಶ್ವರನಾಗುತ್ತಿದ್ದೆನಲ್ಲಾ ಎಂದು ರಾಯಚರಣನಿಗೆ ಆಗಾಗ ಮನಸ್ಸು ಪುಲಕಿತವಾಗುತ್ತಿತ್ತು.

ಈ ನಡುವೆ ಅವನಿಗೆ ಮತ್ತೊಂದು ಶನಿಯೂ ಬೆನ್ನು ಹತ್ತಿತು. ವಸಂತ ಋತುವಿನಲ್ಲಿ ಒಂದು ಹೊತ್ತಾರೆ ರಾಯಚರಣನು ಹಳ್ಳಿಯ ತೋಟದಲ್ಲಿ ತಂಬಾಕು ಸೇದುತ್ತಾ, ಹೊಗೆ ಬಿಡುತ್ತಾ, ಹೊಗೆಯ ಸೋಮಾರಿತನವನ್ನು ತನ್ನ ಸೋಮಾರಿತನದಿಂದ ಅಣಕಿಸುತ್ತಾ ಅರೆಗಣ್ಣಾಗಿ ಕುಳಿತಿದ್ದಾಗ — ಏನಾಗಿಹೋಯಿತು!

ಪಕ್ಕದಲ್ಲಿ ಚೆಂದುಟಬಣ್ಣದ ಕೆಂದಳಿರಿನಿಂದ ಸುಂದರವಾಗಿದ್ದ ಮಾಮರದಲ್ಲಿ ಕೋಗಿಲೆ ಕೂಗಿತು! ರಾಯಚರಣನು ಒಂದು ಕಿರುಬಂಡೆಯ ಮೇಲೆ ಕೂತಿದ್ದನು. ಆ ಜಡ ಶಿಲಾಖಂಡವೂ ಚೈತನ್ಯದ ಪಿಂಡದಂತಾಗಿ ರಾಯಚರಣನ ಮೈಯಲ್ಲಿ ಮಿಂಚು ಸಂಚಾರವಾಯಿತು. ಸಿಡಿಮದ್ದಿಗೆ ಕಿಡಿ ಬಿದ್ದಂತೆ ಇವನು ಜಡತನವನ್ನಾಚೆಗೆ ತಳ್ಳಿ ಕಣ್ಣರಳಿ ನೆಟ್ಟಗೆ ನಿಮಿರಿ ಕುಳಿತನು. ಮತ್ತೆ, ಚೂತ ವೃಕ್ಷದ ಕಿಸಲಯ ರಾಶಿಯಲ್ಲಿ ಆ ದೇವದೂತನ ಕಲಕಂಠವು ಮೆದುಳಿಗೆ ಕಳ್ಳು ಹೊಯ್ಯುವಂತೆ ಹೃದಯವನ್ನು ಮಥಿಸಿ ಕೇಳಿಸಿತು. ರಾಯಚರಣನು ನೋಡುತ್ತಾನೆ: ವಸಂತ ಮಾಸದ ಮನೋಹರತೆ ಸಮಸ್ತ ಲೋಕದ ನೆತ್ತಿಗೂ ಪಿತ್ತದಂತೇರಿಬಿಟ್ಟಿದೆ! ತಳಿರೇನು, ಚಿಗುರೇನು; ನನೆಯೇನು, ಕೊನೆಯೇನು; ಎಲರೇನು! ಮಲರೇನು! ಹರಪುರ ಗ್ರಾಮವೆ ಅಮರಾವತಿಯಾಗಿದೆ! ಆ ತೋಟವೆ ನಂದನವಾಗಿದೆ! ಸ್ವರ್ಗವಾಗುವುದಕ್ಕೆ ಅಪ್ಸರಿಯೊಬ್ಬಳೆ ಬಾಕಿ!

ರಾಯಚರಣನು ಬಾಯ್ದೆರೆದು ಕಣ್ಣರಳಿ ಕಯ್ಗಳೆರಡನ್ನೂ ಆಶ್ಚರ್ಯ ಮುದ್ರೆಯಿಂದ ಮೇಲೆತ್ತಿ ಮೈಯನ್ನು ನಸುಬಾಗಿ ಭಾವಸಮಾಧಿಸ್ಥನಾದಂತೆ ಕಡೆದು ಕಂಡರಿಸಿದ ಗೊಂಬೆಯಾಗಿ ನೋಡುತ್ತಿದ್ದನು. ಅದೋ ದೂರದಲ್ಲಿ ಅಪ್ಸರಿಯೂ ಬರುತ್ತಿದ್ದಾಳೆ! ಎಂತಹ ಸ್ಫುರದ್ರೂಪ: ಚಂದ್ರಮುಖಿ! ಕಮಲನಯನೆ! ಫಣಿವೇಣಿ! ಲತಾಂಗಿ! ಕುಂಭ..! ಸು..ಣಿ! ನಿ..ನಿ! ನೋಡುತ್ತಿದ್ದ ಹಾಗೆ ರಾಯಚರಣನ ಹೃದಯದಲ್ಲಿ ಮನ್ಮಥಸಂಚಾರವಾಯಿತು! ಇನ್ನೇನು? ಹರಪುರ ಗ್ರಾಮವೆ ಸ್ವರ್ಗವಾಗುತ್ತದೆ. ಆ ತೋಟವೆ ನಂದನವಾಗುತ್ತದೆ. ರಾಯಚರಣನೆ ಇಂದ್ರನಾಗುತ್ತಾನೆ. ರಂಭೆಯೋ ಊರ್ವಶಿಯೋ ಮೇನಕೆಯೋ ತಿಲೋತ್ತಮೆಯೋ ಅಥವಾ ಅವರೆಲ್ಲರನ್ನು ಬೆಸೆದುಮಾಡಿದ ಶೃಂಗಾರಸುಂದರಿಯೋ ಅದೋ ದೂರದಲ್ಲಿ ಬರುತ್ತಿದ್ದಾಳೆ!

ಶೃಂಗಾರಸುಂದರಿ ಹತ್ತಿರ ಬಂದಳು: ಆದರೆ, ಅಯ್ಯೋ ಆ ಗ್ರಾಮದ ಬೆಸ್ತರವನ ಅಜ್ಜಿ; ಮೀನು ಬುಟ್ಟಿ ಹೊತ್ತುಕೊಂಡು ಹೋಗುತ್ತಿದ್ದಾಳೆ! ಹಲ್ಲಿಲ್ಲ; ನರೆ ಕೂದಲು, ಕುಳಿಗೆನ್ನೆ; ದುರ್ಗಂಧ ಸೀರೆ;.. ಮತ್ತೆ ಬಳ್ಳಿಯಂತೆ ತೆಳ್ಳಗಿದ್ದರೂ ಲತಾಂಗಿಯಲ್ಲ. ಆ ಹೊಸ ಆವಿಷ್ಕಾರದ ಆಘಾತ ಎಷ್ಟರ ಮಟ್ಟಿಗಿತ್ತು ಎಂದರೆ ರಾಯಚರಣನ ನೆತ್ತಿಗೇರಿದ್ದ ತಂಬಾಕಿನ ಅಮಲೂ ಇಳಿದು ಹೋಯಿತು.

ಅಜ್ಜಿಯೇನೋ ಸುರಕ್ಷಿತವಾಗಿ ಹೊರಟುಹೋದಳು. ಆದರೆ ರಾಯಚರಣನ ಎದೆಯಲ್ಲಿ ಮೂಡಿದ ಮನ್ಮಥನು ಚಿರಸ್ಥಾಯಿಯಾಗಿ ಬಿಟ್ಟನು.

ದರಿದ್ರನಿಗೆ ಪ್ರಣಯಭಾವವೂ ಬರಬರುತ್ತಾ ಹೆಚ್ಚಾಯಿತು. ಚೆಲುವೆಯೊಬ್ಬಳನ್ನು ಒಲುಮೆಯಿಂದ ಗೆಲಿದು ಮದುವೆಯಾಗಬೇಕೆಂದು ಮನಸ್ಸುಮಾಡಿದನು. ಆದರೆ, ಗ್ರಹಚಾರ! ರತಿ ದಾರಿದ್ರ್ಯಪ್ರಿಯಳಲ್ಲ. ಜೊತೆಗೆ, ರಾಯಚರಣನು ಕನ್ನಡಿಯ ಮುಂದೆ ಸ್ಫುರದ್ರೂಪಿಯಾಗಿದ್ದರೂ ಹೆರರ ಕಣ್ಣಿಗೆ ಹಾಗೆ ಕಾಣುತ್ತಿರಲಿಲ್ಲ.

ಮೈ ಕಾಂತಿ ಕೆಂಡವಾಗಿದ್ದರೂ ನೀರಿನ ಸಂಪರ್ಕವಾದಂತಿತ್ತು. ಮೂಗು ಸಂಪಗೆಯಾಗಿದ್ದರೂ ಹುಳು ಹಿಡಿದು ಸಿಂಡಾಗಿತ್ತು. ಕಣ್ಣುಗಳು

ಮುರುಕು ದೇಗುಲದ ಗೋಡೆಯ ಬಿರುಕುಗಳಂತಿದ್ದುವು. ಮೈಗಂಪು ಬಾಯ್ಗಂಪು ಕೈಗಂಪುಗಳಿಗೆ ಒಂದಿನಿತೂ ಕೊರತೆಯಿರಲಿಲ್ಲ.

ಹೀಗಿದ್ದರೂ ಆಶಾವಾದಿಯಾಗಿದ್ದ ರಾಯಚರಣನು ನಿರುತ್ಸಾಹಿಯಾಗದೆ ಆ ಹಳ್ಳಿಯ ಸಾಹುಕಾರನಾಗಿದ್ದ ಕೇನರಾಮಗೋಸ್ವಾಮಿಯ ಬಳಿಗೆ ಹೋಗಿ ಮದುವೆಯ ಕರ್ಚಿಗೆ ಹಣವನ್ನು ಸಾಲ ಕೇಳಿದನು. ನಾಲ್ಕನೆಯ ಸಾರಿ ಕಿರುಹುಡುಗಿಯನ್ನು ಮದುವೆಯಾಗಿದ್ದ ಆ ಮುದಿಗೋಸ್ವಾಮಿ ರಾಯಚರಣನಿಗೆ ಪ್ರಪಂಚದ ನಶ್ವರತೆಯನ್ನೂ ಕಾಮಿನೀ ಕಾಂಚನ ತ್ಯಾಗವನ್ನೂ ಕುರಿತು ಒಂದು ಗಂಟೆ ಉಪದೇಶಮಾಡಿ ಊಟದ ಹೊತ್ತಾಗಿದ್ದರೂ ನಮಸ್ಕಾರ ಹೇಳಿ ಕಳುಹಿಸಿದ್ದನು.

ಹೊನ್ನು ಹೆಣ್ಣುಗಳ ಸಂಪಾದನೆಯಲ್ಲಿ ಸಂಪೂರ್ಣವಾಗಿ ಸೋತು ಹೋದಮೇಲೆ ರಾಯಚರಣನಿಗೆ ಕೇನರಾಮಗೋಸ್ವಾಮಿಯ ಕಾಮಿನೀ ಕಾಂಚನ ತ್ಯಾಗದ ಉಪದೇಶ ಚೆನ್ನಾಗಿ ಮನಸ್ಸಿಗೆ ಹತ್ತಿ ಅವನಲ್ಲಿ ಪೂಜ್ಯ ಬುದ್ಧಿಯುಂಟಾಯಿತು. ಅದರಲ್ಲಿಯೂ ಗೋಸ್ವಾಮಿಯ ಕೆಲವು ಮಾತುಗಳಂತೂ ಮಹಾರ್ಥ ಗರ್ಭಿತವಾಗಿ ತೋರಿದುವು:

"ಐಹಿಕ ಸುಖಗಳನ್ನು ಹುಡುಕಿಕೊಂಡು ಹೋಗುವುದು ಮರುಭೂಮಿಯಲ್ಲಿ ಮರುಮರೀಚಿಕೆಯ ನೀರನ್ನು ಹುಡುಕುವಂತೆ ಅವಿವೇಕವಾದುದು. ಅದರಲ್ಲಿಯೂ, ಸುಖ ಸಂಪತ್ತುಗಳು ನಾವು ಹಿಡಿಯ ಹೋದಷ್ಟೂ ಸಿಕ್ಕದೆ ದೂರಹೋಗುತ್ತವೆ. ದೃಷ್ಟಾಂತವಾಗಿ: ನಮ್ಮ ನೆರಳನ್ನು ನಾವೇ ಹಿಡಿಯಲಿಕ್ಕೆ ಅಟ್ಟಿಕೊಂಡು ಹೋದರೆ ಅದು ಎಂದಾದರೂ ಕೈವಶವಾಗುತ್ತದೆಯೆ? ನಾವು ಅಟ್ಟಿಸಿಕೊಂಡು ಹೋದಷ್ಟೂ ಅದು ಮುಂದೆ ಮುಂದೆ ತಪ್ಪಿಸಿಕೊಂಡೇ ಹೋಗುತ್ತದೆ. ಎಂದಿಗೆ ನಾವು ಅದನ್ನು ಅಟ್ಟುವುದನ್ನು ಬಿಟ್ಟು ಹಿಂತಿರುಗಿ ಪರಾಙ್ಮುಖರಾಗುತ್ತೇವೆಯೋ ಆಗ ಆ ನೆರಳು ನಮ್ಮ ಹಿಂದೆ ನಾಯಿಯಂತೆ ಓಡಿಬರುತ್ತದೆ. ಸುಖವೂ ಆ ನೆರಳಿನಂತೆ: ಅಟ್ಟಿದರೆ ಓಡುತ್ತದೆ; ತಿರಸ್ಕರಿಸಿ ಹಿಂತಿರುಗಿದರೆ ಹಿಂಬಾಲಿಸುತ್ತದೆ. ಆದ್ದರಿಂದ ನಿಜವಾದ ಸುಖ ಪ್ರಾಪ್ತಿಯಾಗಬೇಕಾದರೆ ಇಂದ್ರಿಯ ಸುಖಗಳಿಂದ ವಿಮುಖರಾಗುವುದು, ಎಂದರೆ ಹಿಂತಿರುಗುವುದು, ಅಂದರೆ ವೈರಾಗ್ಯ ಬಹಳ ಆವಶ್ಯಕ. ವೈರಾಗ್ಯದ

ಮಹಿಮೆ ಅದನ್ನು ಪ್ರಯೋಗಿಸಿದವರಿಗೇ ಗೊತ್ತು'' ಎಂದು ಮೊದಲಾಗಿ ಗೋಸ್ವಾಮಿ ಹೇಳಿದ್ದನು.

ಬಹುಶಃ ಗೋಸ್ವಾಮಿ ನಿರ್ವಂಚನೆಯಿಂದ ಹೃತ್ಪೂರ್ವಕವಾಗಿ ಉಪದೇಶ ಮಾಡಿದ್ದರೂ ಮಾಡಿದ್ದಿರಬಹುದು. ಹಣ್ಣು ಹಣ್ಣು ಮುದುಕ ನಾಗಿ ಅವನ ಭಾಗಕ್ಕೆ ಕಿರ`ಹರೆಯದ ನಾಲ್ಕನೆಯ ಹೆಂಡತಿ ಮರು ಮರೀಚಿಕೆಯೇ ಆಗಿದ್ದಿರಬೇಕು. ಅಂತೂ ಅದು ಹೇಗೇ ಇರಲಿ, ರಾಯಚರಣನಿಗೇನೋ ವೈರಾಗ್ಯದಲ್ಲಿ ಅತ್ಯಂತ ವ್ಯಾಮೋಹ ಹುಟ್ಟಿತು. ಅದರಲ್ಲಿಯೂ ''ಅಟ್ಟಿದರೆ ಓಡುತ್ತದೆ; ಬಿಟ್ಟರೆ ಹಿಂಬಾಲಿಸುತ್ತದೆ'' ಎಂಬ ಲಕ್ಷ್ಮಿಯ ಲಕ್ಷಣಗಳನ್ನು ಕುರಿತ ಮಾತುಗಳು ಬಹುಮಟ್ಟಿಗೆ ಮನಸ್ಸಿಗೆ ಬಂದು ರಾಯಚರಣನು ಬೈರಾಗಿಯಾದನು.

ಅವನಾದುದು ವೈಷ್ಣವ ವೈರಾಗಿ. ಧರ್ಮ ಸಾಧನೆಗಳಲ್ಲಿ ವೈಷ್ಣವ ವೈರಾಗ್ಯಕ್ಕಿಂತಲೂ ಸೊಗಸಾದುದು ಮತ್ತೊಂದಿಲ್ಲ. ಅದರಲ್ಲಿ ದೇಹ ದಂಡನೆಯಿಲ್ಲ; ಅನಾವಶ್ಯಕವಾದ ಆತ್ಮದಂಡನೆಯೂ ಇಲ್ಲ! ಬೃಂದಾವನದ ಶ್ರೀ ಕೃಷ್ಣನು ಇಷ್ಟದೇವತೆಯಾದುದರಿಂದ ರಾಸಲೀಲೆಗೂ ಬೇಕಾದಷ್ಟು ಅವಕಾಶವಿರುತ್ತದೆ. ಆ ಸಾಧಕರಿಗೆ ಬೇಕಾದುದು ಪ್ರಪತ್ತಿ. ಎಂದರೆ ಸಂಪೂರ್ಣವಾಗಿ ದೇವರಿಗೆ ಶರಣಾಗುವುದು. ಪ್ರಪತ್ತಿಯೊಂದಿದ್ದರೆ ಏನೇನು ಮಾಡಿದರೂ ಎಲ್ಲಕ್ಕೂ ಕ್ಷಮೆ. ನಾವು ಭಗವಂತನಿಗೆ ಕರುಣಾ ಸಾಗರ ಎಂದು ಬಿರುದು ದಯಪಾಲಿಸುವುದೇನು ಪುಕ್ಕಟೆಯಲ್ಲ!

ಹಿಂದೆ ರಾಯಚರಣನಾಗಿದ್ದ ಶ್ರೀಮತ್ ಭಗವಾನ್‌ದಾಸ ಬಾಬಾಜಿಗೆ ಕೆಲದಿನಗಳಲ್ಲಿಯೇ ಗೋಸ್ವಾಮಿಯ ಮಾತಿನ ಅರ್ಥ ಅನುಭವವೇದ್ಯ ವಾಗತೊಡಗಿತು. ಅಟ್ಟಿದಷ್ಟೂ ಓಡುತ್ತಿದ್ದ ಲಕ್ಷ್ಮಿ ಬಿಟ್ಟೊಡನೆ ಹತ್ತಿರ ಹತ್ತಿರ ಬರತೊಡಗಿದಳು. ಅಷ್ಟು ಸ್ವಲ್ಪ ಕಾಲದ ಸಾಧನೆಯಿಂದ ಅಂತಹ ಸಿದ್ಧಿ ಲಭಿಸುತ್ತದೆ ಎಂದು ರಾಯಚರಣನು ಕನಸಿನಲ್ಲಿಯೂ ಭಾವಿಸಿರಲಿಲ್ಲ. ವೈರಾಗ್ಯದ ಮಹಿಮೆಯನ್ನು ಕಂಡು ಅವನಿಗೆ ಹಿಡಿಸ ಲಾರದಷ್ಟು ಆನಂದವಾಯಿತು. ಎಲ್ಲವನ್ನೂ ಬಿಟ್ಟು ತನ್ನನ್ನು ಆಶ್ರಯಿಸಿದ ವರಿಗೆ ಎಲ್ಲವನ್ನೂ ತನ್ನನ್ನೂ ಕೊಡುತ್ತೇನೆ ಎಂದು ಸಾರಿದ ಆ ಶ್ರೀಕೃಷ್ಣ ಪರಮಾತ್ಮನ ದಿವ್ಯವಾಣಿ ಎಂದಾದರೂ ಹುಸಿಯಾಗುತ್ತದೆಯೇ?

ರಾಯಚರಣನಿಗೆ ವೈರಾಗ್ಯ ಹಿಡಿಯಿತು ಎಂದು ಕೇಳಿದೊಡನೆ ಹಳ್ಳಿಯಲ್ಲಿ ಆನಂದದ ಆಶ್ಚರ್ಯದ ಗೌರವದ ಕೋಲಾಹಲವೆದ್ದಿತು. ತಮಗೆ ಇಷ್ಟವಿಲ್ಲದಿದ್ದರೂ ಅವನಿಗೆ ಕೂಳು ಹಾಕಲೇಬೇಕಾಗಿದ್ದವರಿಗೆ ಸದ್ಯಕ್ಕೆ ಪೀಡೆ ತೊಲಗಿತಲ್ಲಾ ಎಂದು ಸಂತೋಷವಾಗಿ ಭಗವಾನ್‌ದಾಸ ಬಾಬಾಜಿಯನ್ನು ಹೊಗಳಿದರು. ವೈರಾಗಿಗಳಾಗಬೇಕು ಎಂಬ ತೀವ್ರವಾದ ಆಕಾಂಕ್ಷೆಯಲ್ಲಿಯೇ ಜೀವನವನ್ನೆಲ್ಲ ಕಳೆದು ತುದಿ ಮೆಟ್ಟಲಿಗೆ ಬಂದಿದ್ದವರು ತರುಣನ ವೈರಾಗ್ಯಕ್ಕೆ ಮೂಗುಬೆರಳಾಗಿ ಆಶ್ಚರ್ಯಪಟ್ಟರು. ಕೆಲವು ವಿಧವೆಯರು "ಆ ಪುಣ್ಯ ಎಲ್ಲರಿಗೂ ಬರುತ್ತದೆಯೇ? ಎಲ್ಲವೂ ಪೂರ್ವಜನ್ಮದ ಸಂಸ್ಕಾರದ ಮಹಿಮೆ! ದೇವರ ಕೃಪೆ! ಹುಡುಗನಿಗೆ ಮುಮುಕ್ಷುತ್ವ ಬರುವುದೆಂದರೇನು ಸಾಮಾನ್ಯವಾಯಿತೆ? ಹಿಂದಿನ ಕಾಲದಲ್ಲಿ ಧ್ರುವ–ಪುಣ್ಯಾತ್ಮ, ಒಬ್ಬ ಹಾಗೆ ಮಾಡಿದ್ದನಂತೆ. ಇಂದಿನ ಕಾಲದಲ್ಲಿ ಅಂಥಾ ಪುಣ್ಯಾತ್ಮ ನಮ್ಮ ಹಳ್ಳಿಯಲ್ಲಿಯೆ ಹುಟ್ಟುತ್ತಾನೆ ಎಂದು ಯಾರು ಕಂಡಿದ್ದರು!" ಎಂದು ಕಣ್ಣೊರಸಿ ಮೂಗುಜ್ಜಿಕೊಂಡು ಗೌರವ ಪ್ರದರ್ಶನಮಾಡಿದರು.

ಹಿಂದೆ ರಾಯಚರಣನನ್ನು ತಿರಸ್ಕರಿಸುತ್ತಿದ್ದವರೆಲ್ಲರೂ ಶ್ರೀಮತ್ ಭಗವಾನ್‌ದಾಸ ಬಾಬಾಜಿ ಮೊಳಕಾಲಿನಿಂದ ತುಸು ಕೆಳಗಿನವರೆಗೆ ಮಾತ್ರ ಬಿಳಿ ಪಂಚೆ ಸುತ್ತಿಕೊಂಡು, ಬಿಳಿಯ ನಿಲುವಂಗಿ ಹಾಕಿಕೊಂಡು ತುಲಸೀ ಮಣಿಮಾಲೆಯಿಂದಲೂ ವಿವಿಧ ಮುದ್ರೆಗಳಿಂದಲೂ ಶೋಭಿತನಾಗಿ, ಹರಿನಾಮದ ನಾಮಾವಳಿಯಿಂದ ಚಿರತೆಯ ಚರ್ಮದಂತೆ ಕಾಣುತ್ತಿದ್ದ ವಸ್ತ್ರವನ್ನು ಹೊದೆದು, ಮರದ ಮೆಟ್ಟುಗಳನ್ನು ಮೆಟ್ಟಿ, ಸುಪುಷ್ಟವಾಗಿ ಬೆಳೆದಿದ್ದ ಜುಟ್ಟನ್ನು ಕೆದರಿಬಿಟ್ಟು, ಶಂಖವೂದುತ್ತಾ ಜಾಗಟೆ ಬಾರಿಸುತ್ತಾ ಹರಿನಾಮ ಘೋಷಿಸುತ್ತಾ ಬೀದಿಯಲ್ಲಿ ಭಿಕ್ಷಾಟನೆಗೆ ಬಂದನೆಂದರೆ ಕುಳಿತವರೆದ್ದು ಧನಧಾನ್ಯಗಳನ್ನು ಭಕ್ತಿ ಗೌರವಗಳಿಂದ ನಿವೇದಿಸುತ್ತಿದ್ದರು.

ಸ್ವಲ್ಪ ಕಾಲದಲ್ಲಿಯೆ ಕಾಮಿನೀಕಾಂಚನ ತ್ಯಾಗ ಮಾಡಿದ ಬಾಬಾಜಿಗೆ ಎರಡನೆಯದರ ಸಿದ್ಧಿಯೇನೋ ಕೈಗೂಡಿತು. ಆದರೆ ಮನಸ್ಸು ಮೊದಲನೆಯದರ ಸಿದ್ಧಿಗೂ ಹಾತೊರೆಯತೊಡಗಿತು; ಅದಕ್ಕಾಗಿ

ಬಾಬಾಜಿಯ ಸವಾರಿ ಯಾತ್ರೆ ಹೊರಟಿತು: ಊರಿನಲ್ಲಿ ಅನುಕೂಲವಿರಲಿಲ್ಲವಾಗಿ, ಅಥವಾ ಅನುಕೂಲ ಮಾಡಿಕೊಳ್ಳಲು ಗೊತ್ತಿರಲಿಲ್ಲವಾಗಿ.

ದಾರಿಯಲ್ಲಿ ಅನೇಕ ಪವಿತ್ರ ಕ್ಷೇತ್ರಗಳಲ್ಲಿ ಭಗವಾನ್‌ದಾಸ ಬಾಬಾಜಿ ವೈರಾಗ್ಯದ ಮಹಿಮೆಯನ್ನು ಯಥೇಚ್ಛವಾಗಿ ನೋಡುತ್ತಾ ಅವಕಾಶ ಸಿಕ್ಕಿದಾಗಲೆಲ್ಲಾ ಯಥಾಸಾಮರ್ಥ್ಯವಾಗಿ ಕಿಂಚಿದನುಭವಮಾಡಿಕೊಳ್ಳುತ್ತಾ ಮುಂಬರಿದನು. ಕೇನರಾಮಗೋಸ್ವಾಮಿಯ ಮಾತು ಹೆಜ್ಜೆ ಹೆಜ್ಜೆಗೂ ಅನುಭವಸಿದ್ಧವಾಗುತಿತ್ತು.

ಯಾತ್ರೆ ಮಾಡುತ್ತಾ ಬಾಬಾಜಿ ಒಂದು ವೈಷ್ಣವ ಗ್ರಾಮಕ್ಕೆ ಬಂದಾಗ ಅಲ್ಲಿಯ ವೈಷ್ಣವ ದೇವಸ್ಥಾನದಲ್ಲಿ ಮೇಳ ನಡೆಯುತ್ತದೆ ಎಂದು ತಿಳಿಯಬಂದಿತು. ಮೇಳ ಎಂದರೆ ವೈಷ್ಣವ ಬೈರಾಗಿಗಳಲ್ಲಿ ಬೇರೆ ಬೇರೆ ಅರ್ಥವಿದೆ. ಅವರಲ್ಲಿ ಬೈರಾಗಿಗಳಂತೆಯೆ ಬೈರಾಗಿಣಿಯರೂ ಇರುತ್ತಾರೆ. ನಾನು ನನ್ನದು ಎಂಬ ಮಮತೆಯನ್ನೂ ಮೇಲು ಕೀಳು ಹಿರಿದು ಕಿರಿದು ಕೊಳಕು ಚೊಕ್ಕಟ ಮೊದಲಾದ ದ್ವಂದ್ವ ಭಾವಗಳನ್ನೂ ತ್ಯಾಗಮಾಡಿದ ಬೈರಾಗಿ ಮತ್ತು ಬೈರಾಗಿಣಿಯರಿಗೆ ಸಾಮಾನ್ಯ ಸಂಸಾರಿಗಳಂತೆ ವಿವಾಹಬಂಧನವು ನಿಷಿದ್ಧ. ಆದ್ದರಿಂದ ಅವರು ಹೀಗೆ ಮಾಡುತ್ತಾರೆ:

ಮಧುರಭಾವಸಾಧನ ಮಾಡಬೇಕೆನ್ನುವ ವೈಷ್ಣವಿಯರು ರಾತ್ರಿಯ ಕಾಲದಲ್ಲಿ ದೇವಸ್ಥಾನಕ್ಕೆ ಬಂದು, ಮುಸುಗು ಹಾಕಿಕೊಂಡು, ಹಿಲಾಲಿನ ಬೆಳಕಿನ ಮಬ್ಬಿನಲ್ಲಿ, ಸಾಲಾಗಿ, ಬೆರಳೊಂದನ್ನು ಮಾತ್ರ ಬುರುಕಿಯ ಹೊರಗೆ ತೋರಿಸುತ್ತಾ ಕೂತುಕೊಳ್ಳುತ್ತಾರೆ. ಮಧುರಭಾವಸಾಧನೆ ಮಾಡಲಿಚ್ಛಿಸುವ ಬೈರಾಗಿಗಳೂ ಅಲ್ಲಿಗೆ ಹೋಗಿ ಕಣ್ಣು ಕಟ್ಟಿಕೊಂಡು ಸಾಲಾಗಿ ನಿಲ್ಲುತ್ತಾರೆ. ಮುಖಂಡನು ಒಬ್ಬೊಬ್ಬ ವೈಷ್ಣವ ಬೈರಾಗಿಯನ್ನೇ ಮುಟ್ಟಿ ಸೂಚನೆ ಕೊಡಲು, ಅವನು ತಡವುತ್ತಾ ಮುಂಬರಿದು ಸಾಲಾಗಿ ಕುಳಿತಿರುವ ವೈಷ್ಣವಿಯರಲ್ಲಿ ಯಾರ (ಬುರುಕಿಯ ಹೊರಗಿರುವ) ಕೈ ಬೆರಳನ್ನು ಮೊದಲು ಮುಟ್ಟಿ ಹಿಡಿಯುತ್ತಾನೆಯೊ ಅವಳೊಡನೆ, ವಯಸ್ಸಿನ ತಾರತಮ್ಯಗಳನ್ನಾಗಲಿ ಶರೀರದ ರೋಗಾರೋಗ್ಯಗಳನ್ನಾಗಲಿ ರೂಪ ಕುರೂಪ ಲಕ್ಷಣ ವಿಲಕ್ಷಣಗಳನ್ನಾಗಲಿ ಲಕ್ಷಿಸದೆ, ಒಂದು ವರ್ಷಕಾಲ

ಮಧುರಭಾವಸಾಧನೆ ಮಾಡಲೇಬೇಕು. ತರುವಾಯ, ಅವನ ಪಾಡು ಅವನಿಗೆ; ಅವಳ ಪಾಡು ಅವಳಿಗೆ. ಇಬ್ಬರೂ ಮತ್ತೆ ಬೇರೆಬೇರೆಯ ವೈಷ್ಣವ ಸ್ವಯಂವರಗಳಿಗೆ ಹೋಗುತ್ತಾರೆ.

ಆ ಸಾಧಕರಿಗೆ ಸಂತಾನನಿರೋಧದ ವಿಜ್ಞಾನ ವಿದ್ಯೆ ಚೆನ್ನಾಗಿ ಗೊತ್ತಿರುವುದರಿಂದ, ಮುಕ್ತಾತ್ಮಗಳನ್ನು ಜನ್ಮವೆತ್ತುವಂತೆ ಮಾಡಿ, ಹುಟ್ಟು ಸಾವುಗಳ ಬಲೆಯಲ್ಲಿ ಅವುಗಳನ್ನು ಸಿಕ್ಕಿಸಿ, ಕೋಟಲೆಗೇಳಿಸುವ ಪಾಪವನ್ನು ಅವರು ಎಂದಿಗೂ ಕಟ್ಟಿಕೊಳ್ಳುವುದಿಲ್ಲ.

ನಮ್ಮ ಭಗವಾನ್‌ದಾಸ ಬಾಬಾಜಿಯೂ ರಾತ್ರಿ ಮೇಳಕ್ಕೆ ಹೋದನು. ಕಣ್ಣುಕಟ್ಟಿಕೊಳ್ಳುವ ಮೊದಲೇ ವೈಷ್ಣವಿಯರ ಸಾಲನ್ನು ಸಮೀಕ್ಷಿಸಿದನು. ಆದರೆ, ಹಾಳಾಯಿತು! ಎಲ್ಲರೂ ಬುರುಕಿ ಹಾಕಿಕೊಂಡಿದ್ದಾರೆ! ಆದರೂ ಬುರುಕಿಗಳನ್ನೇ ನೋಡಿ ಅಂದಾಜುಮಾಡಿದನು. ಬಹಿರಂಗ ಸೌಂದರ್ಯವು ಅಂತರಂಗ ಸೌಂದರ್ಯಕ್ಕೆ ಸಾಕ್ಷಿಯಲ್ಲವೇ? (ಮಧುರ ಭಾವಸಾಧನೆಯಲ್ಲಿ ಸೌಂದರ್ಯ ಮೋಹದ ಕಾಮುಕರ್ಮವಿರಬಾರದೆಂಬುದು ಅವನಿಗೆ ಆಗ ಮರೆತುಹೋಗಿತ್ತು!) ಒಬ್ಬಳ ಬುರುಕಿ ಮನಸ್ಸಿಗೆ ಒಪ್ಪಿತು; ಲಕ್ಷಣವಾಗಿತ್ತು. ಬಾಬಾಜಿ ಅವಳಿಗೆ ನೇರವಾಗಿ ನಿಂತು ಕಣ್ಣು ಕಟ್ಟಿಕೊಂಡನು.

ಮುಖಂಡನು ತನ್ನ ಪಕ್ಕದಲ್ಲಿದ್ದ ಮುದಿ ಬೈರಾಗಿಯೊಬ್ಬನನ್ನು ಮುಟ್ಟಿ ವೈಷ್ಣವಿಯರ ಬಳಿಗೆ ಬಿಡಲು ನಮ್ಮ ಬಾಬಾಜಿಗೆ ಎದೆ ಪದರಾಡತೊಡಗಿತು. ಅವನೆಲ್ಲಿ ತಾನು ಕಣ್ಣಿಟ್ಟಿದ್ದ ಬುರುಕಿಯನ್ನು ಮುಟ್ಟಿಬಿಡುತ್ತಾನೆಯೊ ಎಂದು. ತಡೆಯಲಾರದೆ ತನ್ನ ಕಣ್ಣಿನ ಬಟ್ಟೆಯನ್ನು ಯಾರೂ ಕಾಣದಂತೆ ತುಸು ಓರೆಮಾಡಿ ನೋಡತೊಡಗಿದನು. ಆ ಮುದಿ ಬಾಬಾಜಿ ದೊಣ್ಣೆಯೂರಿಕೊಂಡು ತೂರಾಡುತ್ತಾ ಹೋಗಿ ಮುಟ್ಟಿದನು. ಭಗವಾನ್‌ದಾಸನಿಗೆ ಜೀವ ಬಂದಂತಾಯಿತು. ಆ ಮುದಿ ಬೈರಾಗಿ ತಾನು ವರಿಸಿದ್ದ ಬುರುಕಿಯ ತಂಟೆಗೆ ಹೋಗಿರಲಿಲ್ಲ!

ನಮ್ಮ ಬಾಬಾಜಿಯ ಸರದಿಯೂ ಬಂತು. ಓರೆಯಾಗಿದ್ದ ಬಟ್ಟೆಯಿಂದ ಒಕ್ಕಣ್ಣು ಕಾಣುತ್ತಿದ್ದರೂ ಹುಟ್ಟು ಕುರುಡನಂತೆ ಅತ್ತಿತ್ತ ತೂರಾಡಿ ನಡೆಯುತ್ತಾ ಹೋಗಿ ತಾನು ಒಲಿದಿದ್ದ ಬುರುಕಿಯ ಕಂಡಿಯಲ್ಲಿ

ಹೊರಟುಕೊಂಡಿದ್ದ ಬೆರಳನ್ನು ಪ್ರೀತಿ ಸೋರುವಂತೆ ಹಿಡಿದನು. ವೈಷ್ಣವಿ ಬುರುಕಿ ಹಾಕಿಕೊಂಡೇ ಅವನನ್ನು ಹಿಂಬಾಲಿಸಿದಳು.

ಮಧುರಭಾವಸಾಧನೆಯ ಸ್ಥಾನದಲ್ಲಿ ಬುರುಕಿಯನ್ನು ತೆಗೆದು ನೋಡಿದಾಗ ಬಾಬಾಜಿಯ ಹೊಂಗನಸು ಹುಡಿಹುಡಿಯಾಗಿ ಹಡಿಗೆತ್ತಿತು. ಹರಪುರದ ಬೆಸ್ತರವನ ಅಜ್ಜಿ ಅಪ್ಸರಿಯಾಗಿ ಕಂಡಳು ಅವನ ಸ್ವಯಂವರದ ವೈಷ್ಣವಿಯ ಮುಂದೆ! ಆದರೇನು ಮಾಡುವುದು? ಬೈರಾಗಿಗಳ ಧರ್ಮದ ಪ್ರಕಾರ ಒಂದು ವರ್ಷ ಅವಳೊಡನೆ ಸಾಧನೆ ಮಾಡಲೇಬೇಕಷ್ಟೆ!

ತರುಣ ಬಾಬಾಜಿಗೆ ಆ ಮುದಿ ಹದ್ದಿನೊಡನೆ ಮಧುರಭಾವ ಸಾಧನೆ ಮಾಡಲು ಸ್ವಲ್ಪವೂ ಮನಸ್ಸೊಪ್ಪಲಿಲ್ಲ. ಆದರೆ ಆ ಮುದುಕಿಯ ಅಭಿಪ್ರಾಯ ಭಿನ್ನವಾಗಿತ್ತು. ಇನ್ನೇನು ತುಸು ಕಾಲದಲ್ಲಿಯೇ ಸಾಯುವುದು ನಿಶ್ಚಯವಾದ್ದರಿಂದ ಆದಷ್ಟು ಧರ್ಮಸಾಧನೆಮಾಡಿ ಪರಂಧಾಮದಲ್ಲಿ ವಿಷ್ಣುಪಾದಾರವಿಂದವನ್ನು ಸೇರಬೇಕೆಂದು ಆಕೆಯ ಮಹೋಗ್ರವಾದ ಹಂಬಲಾಗಿತ್ತು. ಸರಿ. ಸಾಧನೆಗೆ ಬದಲು ಕಾದಾಟ ಮೊದಲಾಯಿತು. ಒಂದು ವರ್ಷದ ಮಾತಿರಲಿ, ಒಂದು ತಿಂಗಳೂ ಅವಳೊಡನೆ ಇರಲಾರದೆ ಬಾಬಾಜಿ ಹೇಳದೆ ಕೇಳದೆ ಹರಪುರ ಗ್ರಾಮಕ್ಕೆ ಕದ್ದೋಡಿಬಂದನು. ಆದರೆ ತುಂಬಾ ಅನುಭವಶಾಲಿಯಾಗಿ ಬಂದಿದ್ದನು.

ಮಧುರಭಾವಸಾಧನೆಯ ದಿವ್ಯರುಚಿಯನ್ನು ಸವಿನೋಡಿದ್ದ ಆತನಿಗೆ ಸುಮ್ಮನಿರಲಾಗಲಿಲ್ಲ. ಮನೆಯಿಂದ ಮನೆಗೆ ಅಲೆದು ದುಡ್ಡು ಒಟ್ಟುಮಾಡಿ ಒಂದು ಅಖಾಡ ಕಟ್ಟಿಸಿದನು. ಅಖಾಡ ಎಂದರೆ ವೈಷ್ಣವ ಬೈರಾಗಿಗಳ ಮಾತಿನಲ್ಲಿ ವೈಷ್ಣವಮಠ ಎಂದರ್ಥ. ಭಗವಾನ್‌ದಾಸ ಬಾಬಾಜಿಯೇ ಆ ಮಠಕ್ಕೆ ಮಹಂತನಾಗಿ ನಿಂತನು. ಅಲ್ಲದೆ ಊರಿನಲ್ಲಿ ಬಲಿಷ್ಠನೂ ಶ್ರೀಮಂತನೂ ವಿದ್ಯಾವಂತನೂ ಎನ್ನಿಸಿಕೊಂಡಿದ್ದ ಕೇನ ರಾಮಗೋಸ್ವಾಮಿ ಬಾಬಾಜಿ ಯಾತ್ರೆಗೆ ಹೋಗಿದ್ದಾಗ ಅಕಸ್ಮಾತ್ತಾಗಿ (ನಾಲ್ಕನೆಯ ಕಿರುಹರೆಯದ ಹೆಂಡತಿಯ ದೆಸೆಯಿಂದ ಎಂದು ಆಗದವರು ಹೇಳುತ್ತಿದ್ದರು.) ತೀರಿಕೊಂಡಿದ್ದರಿಂದ ಭಗವಾನ್‌ದಾಸನೇ ಆತನ ಬಲಿಷ್ಠಸ್ಥಾನ ಶ್ರೀಮಂತಸ್ಥಾನ ವಿದ್ಯಾವಂತನ ಸ್ಥಾನಗಳ ಜೊತೆಗೆ ಗುರು ಸ್ಥಾನವನ್ನೂ ವಹಿಸಿಕೊಂಡನು. ಕೇನರಾಮನ ನಾಲ್ಕು ಸ್ಥಾನಗಳನ್ನು

ವಹಿಸಿಕೊಂಡವನಿಗೆ ಐದನೆಯ ಸ್ಥಾನವನ್ನೂ ಏತಕ್ಕೆ ವಹಿಸಿಕೊಳ್ಳಬಾರದು ಎಂಬ ಉಪಕಾರಬುದ್ಧಿ ಹುಟ್ಟಿತು. ಕೇನರಾಮನ ತರುಣ ವಿಧವೆಯ ದುಃಖವನ್ನೂ ಕಣ್ಣೀರನ್ನೂ ತೊಡೆಯುವ ಸಲುವಾಗಿ ಆಕೆಗೆ ಹೆಚ್ಚಾಗಿ ದೇವರ ಪ್ರಸಾದವನ್ನೂ ಕೊಟ್ಟು, ಪದೇಪದೇ ಅಖಾಡಕ್ಕೆ ಬಂದು ವಿಷ್ಣುಪ್ರೀತಿ ಸಂಪಾದನೆ ಮಾಡಬೇಕೆಂದು ಕರುಣೆಯಿಂದ ಬೋಧಿಸಿದನು. ಮುದಿಗಂಡನ ಹೆಂಡತಿಯಾಗಿದ್ದು ಇಂಗಿತಜ್ಞಳಾಗಿದ್ದ ಆಕೆಯೂ ಧರ್ಮಸಂಕೇತವನ್ನು ಅರಿತು ಸಂತೋಷದಿಂದ ಸಮ್ಮತಿಸಿದಳು.

ದಿವಂಗತನಾಗಿದ್ದ ಕೇನರಾಮನ ತರುಣ ವಿಧವೆ ಪತಿವಿಯೋಗದ ದುಃಖ ಶಮನಾರ್ಥವಾಗಿಯೂ ಆತ್ಮಕ್ಷೇಮಕ್ಕಾಗಿಯೂ ಭಗವಾನ್‌ದಾಸ ಬಾಬಾಜಿಯ ಮಠಕ್ಕೆ ಆಗಾಗ್ಗೆ ಹೋಗಿ ಬಾಬಾಜಿ ಪೂಜಿಸುತ್ತಿದ್ದ ರಾಧಾಕೃಷ್ಣ ಮೂರ್ತಿಯ ಮುಂದೆ ಕಣ್ಣೀರು ಸುರಿಸಿ ತನ್ನ ದುರವಸ್ಥೆಯನ್ನು ಹೇಳಿಕೊಳ್ಳುತ್ತಿದ್ದಳು. ಮಠಕ್ಕೆ ಹೋಗಿ ಬಂದ ಹಾಗೆಲ್ಲಾ ಆಕೆಯ ಭಕ್ತಿ ಹೆಚ್ಚಿತು. ಮನೆ ಬೇಡವಾಯಿತು. ಸದಾ ಶ್ರೀ ರಾಧಾಕೃಷ್ಣರ ಪಾದಸಾನ್ನಿಧ್ಯದಲ್ಲಿಯೇ ಇರಬೇಕೆಂದು ಮನಸ್ಸಾಗಿ ಹಗಲಿನ ಬಹು ಭಾಗವನ್ನು ಅಲ್ಲಿಯೇ ಕಳೆಯತೊಡಗಿದಳು. ಆಕೆಯ ಭಕ್ತಿಯನ್ನು ನೋಡಿ ಬಾಬಾಜಿ ಅವಳಿಗೆ 'ರಾಧಾದಾಸಿ' ಎಂದು ನಾಮಕರಣಮಾಡಿ ಹರಸಿ ಬಿರುದು ಹೊರಿಸಿದನು.

ರಾಧಾದಾಸಿಯ ಭಕ್ತಿಯ ಕಥೆ ಚಿತ್ರ ವಿಚಿತ್ರವಾಗಿ ಊರಿನಲ್ಲೆಲ್ಲ ಹಬ್ಬಿತು. ಕೆಲವರು ಆಕೆಗೆ ದೇವರು ನಿತ್ಯವೂ ಕಾಣಿಸಿಕೊಳ್ಳುತ್ತಾನಂತೆ ಎಂದರು. ಕೆಲವರು ಶ್ರೀ ಕೃಷ್ಣನು ಆಕೆ ಕೊಡುವ ನೈವೇದ್ಯವನ್ನು ಆಕೆಯ ಕೈಯಿಂದಲೆ ತುತ್ತು ತುತ್ತಾಗಿ ಸ್ವೀಕರಿಸುತ್ತಾನಂತೆ ಎಂದರು. ಮತ್ತೆ ಕೆಲವರು ಆಕೆಗೆ ಭ್ರೂಮಧ್ಯೆ ಜ್ಯೋತಿಃಪುರುಷನು ಭೇಟಿ ಕೊಡುತ್ತಾನೆ ಎಂದರು. ಇನ್ನೂ ಕೆಲವರು ವಿಷ್ಣು ಪ್ರತ್ಯಕ್ಷನಾಗಿ 'ನಿನ್ನನ್ನು ಕೆಲ ದಿನಗಳಲ್ಲಿಯೆ ಲಕ್ಷ್ಮಿಯನ್ನಾಗಿ ಮಾಡಿಕೊಳ್ಳುತ್ತೇನೆ' ಎಂದು ಆಕೆಗೆ ಭಾಷೆ ಕೊಟ್ಟಿದ್ದಾನಂತೆ ಎಂದು ನಂಬಿ ನುಡಿದರು. ಅಂತೂ ಹಳ್ಳಿಯ ತುಂಬಾ ರಾಧಾದಾಸಿಯ ಭಕ್ತಿಯ ಮಾತು ಹಬ್ಬಿತು.

ಉಳಿದ ವಿಧವೆಯರು 'ರಾಧಾದಾಸಿಗಿಂತಲೂ ನಾವೇನು ಕಡಮೆ

ಭಕ್ತಿಯಲ್ಲಿ? ಅವಳಿಗಿಂತಲೂ ಎಷ್ಟೋ ಮೊದಲೇ ಗಂಡಂದಿರನ್ನು ಕಳೆದು ಕೊಳ್ಳಲಿಲ್ಲವೇ ನಾವು?' ಎಂದು ದೇವರ ಮೇಲೆ ಕ್ರುದ್ಧರಾಗಿ, ಅವಳಿಗಿಂತಲೂ ಹೆಚ್ಚಾಗಿ ಮಠಕ್ಕೆ ಹೋಗತೊಡಗಿದ್ದುದರಿಂದ ವಿಷ್ಣುಪತ್ನಿಯಾದ ಲಕ್ಷ್ಮಿಯ ಸ್ಥಾನಕ್ಕೆ ಉಮೇದುವಾರರು ಹೆಚ್ಚಿದರು.

ಕೇನರಾಮನ ತರುಣ ವಿಧವೆಗೆ ರಾಧಾದಾಸಿ ಎಂದು ಹೆಸರು ಕೊಟ್ಟ ಮೇಲೆ ಭಗವಾನ್‌ದಾಸನು ತನ್ನ ಹೆಸರನ್ನೂ ಬದಲಾಯಿಸಿಕೊಂಡನು. ಭಗವಾನ್ ಎಂದರೇನು? ಕೃಷ್ಣ ಎಂದರೇನು? ಆದ್ದರಿಂದ ಕೃಷ್ಣದಾಸ ಎಂದು ಹೆಸರಿಟ್ಟುಕೊಂಡನು. ಪರ್ಯಾಯಾರ್ಥದ ದೃಷ್ಟಿಯಿಂದ ಹೆಸರು ಬದಲಾಯಿಸಿಕೊಂಡ ಅವನಿಗೆ ಗಣಿತದ ದೃಷ್ಟಿಯೂ ಹೊಳೆಯಿತು. ರಾಧೆಗೆ ಕೃಷ್ಣನು ಪ್ರಿಯನಾದರೆ ರಾಧಾದಾಸಿಗೆ ಕೃಷ್ಣದಾಸನು ಪ್ರಿಯನಾಗಬಾರದೇಕೆ?

ಒಂದು ರಾತ್ರಿ ಕೃಷ್ಣದಾಸನು ರಾಧಾದಾಸಿಗೆ ಮಧುರ ಭಾವ ಸಾಧನೆಯ ಮಹಿಮೆಯನ್ನೂ, ಪುರುಷರೆಲ್ಲ ಕೃಷ್ಣರು ಸ್ತ್ರೀಯರೆಲ್ಲ ರಾಧೆಯರು ಎಂಬ ತತ್ವವನ್ನೂ, ವೈಷ್ಣವರ ಗುಪ್ತಸಾಧನೆಗಳನ್ನೂ ವಿವರಿಸಿದನು. ಕೇಳಿ ರಾಧಾದಾಸಿಗೆ ರೋಮಾಂಚವಾಗಿ 'ಅಯ್ಯೋ ನಾನು ಅಂತಹ ಮಹಾ ಯೋಗ್ಯತೆಗೆ ಅರ್ಹಳೇ? ಪುಣ್ಯವಿಲ್ಲದಿದ್ದರೆ ಅದೆಲ್ಲಿ—ಲಭಿಸುತ್ತದೆಯೇ?' ಎಂದು ಮರುಗಿದಳು.

ಕೃಷ್ಣದಾಸ ಬಾಬಾಜಿ "ರಾಧಾದಾಸಿ, ನೀನು ಮರುಗಬೇಡ. ನಿನ್ನಾತ್ಮವನ್ನು ನನಗೊಪ್ಪಿಸಿ ಶರಣಾಗು. ನಾನು ನಿನ್ನನ್ನು ವೈಕುಂಠಕ್ಕೆ ತಕರಾರಿಲ್ಲದೆ ಕರೆದೊಯ್ಯುತ್ತೇನೆ. ಬೇಕಾದ್ದೇನಂದರೆ ಪ್ರಪತ್ತಿ, ಭಕ್ತಿ. ಅಂದರೆ ನಾನು ಹೇಳಿದಂತೆ ಕೇಳುವುದು" ಎಂದು ಹೂವುಗಳಿಂದ ಅಲಂಕೃತವಾಗಿ ಉಯ್ಯಾಲೆಯ ಮೇಲಿದ್ದ ರಾಧಾಕೃಷ್ಣರ ಮೂರ್ತಿಯನ್ನು ನಿರ್ದೇಶಿಸಿ ಕೈ ಮುಗಿದು ಮತ್ತೆ "ನಾನು ಹೇಳಿದಂತೆ ನೀನು ಕೇಳಬೇಕು" ಎಂದನು.

"ನಾನು ಒಲ್ಲೆ ಎಂದೆನೇ? ತಮಗೆ ನನ್ನ ಮೇಲೆ ಇನ್ನೂ ದಯೆ ಬರಲಿಲ್ಲ. ಬಡವಳ ಮೇಲೆ ಕೃಪೆದೋರಬೇಕು" ಎಂದು ರಾಧಾದಾಸಿ ಕಣ್ಣೀರು ಮಿಡಿದಳು.

ಬಾಬಾಜಿ "ಹಾಗಾದರೆ ಏಳು, ಈಗಲೇ ಪ್ರಾರಂಭಿಸೋಣ. ಅಧ್ಯಾತ್ಮ ಸಾಧನೆಯ ವಿಚಾರದಲ್ಲಿ ಎಷ್ಟು ಶೀಘ್ರ ತೊಡಗಿದರೆ ಅಷ್ಟೂ ಕಲ್ಯಾಣವೇ!" ಎಂದು ಹೇಳಿ ಉಯ್ಯಾಲೆಯ ಮೇಲಿದ್ದ ರಾಧಾಕೃಷ್ಣರ ವಿಗ್ರಹವನ್ನು ಎತ್ತಿ ಕೆಳಗಿಟ್ಟನು.

ರಾಧಾದಾಸಿ ಕುತೂಹಲದಿಂದಲೂ ಆಶ್ಚರ್ಯದಿಂದಲೂ ನೋಡುತ್ತಿದ್ದಹಾಗೆ ಕೃಷ್ಣದಾಸನು ತಾನೇ ಉಯ್ಯಾಲೆಯ ಮೇಲೆ ಕೂತನು. ಭಾವವಶನಾದನು. ಕೃಷ್ಣದಾಸನಲ್ಲಿ ದಾಸತ್ವವು ಮೆಲ್ಲ ಮೆಲ್ಲನೆ ಅಳಿಯಿತು. ಕೃಷ್ಣತ್ವವು ಸಂಪೂರ್ಣವಾಗಿ ವ್ಯೈದೋರಿತು.

ದೂರ ಕುಳಿತು ನೋಡುತ್ತಿದ್ದ ಅವಳ ಕಡೆ ಶೃಂಗಾರ ದೃಷ್ಟಿಯಿಂದ ನೋಡುತ್ತಾ ಭಾವಗದ್ಗದ ವಾಣಿಯಿಂದ "ರಾಧಾ, ಬಾ ಇಲ್ಲಿಗೆ, ನಾನು ಬಂದಿದ್ದೇನೆ, ಬೃಂದಾವನದ ಶ್ರೀಕೃಷ್ಣಮೂರ್ತಿ, ನಿನ್ನ ಭಕ್ತಿಗೆ ಮೆಚ್ಚಿ!" ಎಂದು ತೋಳು ಚಾಚಿದನು.

ರಾಧಾದಾಸಿಗೂ ದಾಸತ್ವವು ಅಳಿಸಿಹೋಗಿತ್ತು. ಭಾವವಶಳಾಗಿದ್ದ ಆಕೆಗೆ ತಾನೂ ರಾಧೆಯಾಗಿದ್ದಂತೆ ಅನುಭವವಾಯಿತು. ವ್ಯೆಯಾರದಿಂದ ಮೇಲೆದ್ದು ಬಳುಕುತ್ತಾ ಹೋಗಿ .......ಮುಂದೆ ಆಕೆಗೆ ಪ್ರಜ್ಞೆಯಿರಲಿಲ್ಲ. ಯಾವುದೋ ಒಂದು ಮಹದಾನಂದದ ಹೊಳೆಯಲ್ಲಿ ಕೊಚ್ಚಿ ಹೋಗುತ್ತಿದ್ದಳು.

ರಾಯಚರಣನಿಗೆ ವೈರಾಗ್ಯದ ಮಹಿಮೆಯನ್ನು ಕುರಿತಾಡಿದ ಕೇನರಾಮನ ಮಾತು ನೆನಪಿಗೆ ಬಂತು:

"ಅಟ್ಟಿದರೆ ಓಡುತ್ತದೆ; ಬಿಟ್ಟರೆ ಹಿಂಬಾಲಿಸುತ್ತದೆ."





## ಕಾವ್ಯಾಲಯ ಪ್ರಕಾಶಕರು

# ಕನ್ನಡ ಕಾವ್ಯಮಾಲೆ

ಈ ಮಾಲೆಯಲ್ಲಿ ವರ್ಷದಲ್ಲಿ ಕ್ರೌನ್ ಅಷ್ಟಪತ್ರಾಕಾರದ ಸುಮಾರು ನೂರು ಪುಟಗಳ ಆರು ಗ್ರಂಥಗಳು ಮೂಡುತ್ತವೆ. ಪ್ರತಿ ಪುಸ್ತಕದ ಬೆಲೆ ಸಾಮಾನ್ಯವಾಗಿ (i) ಸಾದಾ ಪ್ರತಿಗೆ: ೧೨ ಆಣೆ; (ii) ಕ್ಯಾಲಿಕೊ ಪ್ರತಿಗೆ: ರೂ. ೧–೪–೦.

ಮಾಲೆಯ ಚಂದಾದಾರರಿಗೆ ಆಯಾ ವರ್ಷದ ಮಾಲೆಯ ಪ್ರಕಟನೆಗಳನ್ನು ಪೋಸ್ಟಲ್ ಸರ್ಟಿಫಿಕೆಟ್ ಪಡೆದು ಬುಕ್-ಪೋಸ್ಟ್ ಮೂಲಕ ಉಚಿತವಾಗಿ ಕಳುಹಿಸಲಾಗುತ್ತದೆ. ಚಂದಾ ಹಣವನ್ನು ಮುಂಗಡವಾಗಿ ಪಾವತಿಮಾಡುವವರು ಚಂದಾದಾರರು.

ವರ್ಷದ ಚಂದಾ (ಅ. ವೆ. ಸೇರಿ) (೧) ಸಾಮಾನ್ಯ ಪ್ರತಿಗಳನ್ನು ಅಪೇಕ್ಷಿಸುವವರಿಗೆ ರೂ. ೪–೦–೦; (೨) ಕ್ಯಾಲಿಕೊ ಪ್ರತಿಗಳನ್ನು ಅಪೇಕ್ಷಿಸುವವರಿಗೆ ರೂ. ೬–೮–೦; (೩) ಒಟ್ಟಿಗೆ ೧೦೦ ರೂಪಾಯಿ ಕೊಡುವವರು ಅಜೀವ ಚಂದಾದಾರರು.

## ಮಾಲೆಯ ಪ್ರಕಟನೆಗಳು

ಕೆ. ವಿ. ಪುಟ್ಟಪ್ಪನವರ—

| | | | |
|---|---|---|---|
| ೧. | ಕಿಂದರಿಜೋಗಿ, ಇತರ ಕಥನ ಕವನಗಳು | ರೂ. ೧–೪; | ೧೨ ಆಣೆ |
| ೨ | ಸಂನ್ಯಾಸಿ ಮತ್ತು ಇತರ ಕಥೆಗಳು | ರೂ. ೧–೪; | ೧೨ ಆಣೆ |
| ೩. | ಚಿತ್ರಾಂಗದಾ (ಮಹಾಕಾವ್ಯ) | ರೂ. ೧–೪, | ೧೨ ಆಣೆ |
| ೪–೫. | ಕಾನೂರು ಸುಬ್ಬಮ್ಮ ಹೆಗ್ಗಡಿತಿ: ಭಾಗ ೧–೨ | ರೂ. ೨–೮; | ರೂ. ೧–೮ |
| ೬–೭. | ಕಾನೂರು ಸುಬ್ಬಮ್ಮ ಹೆಗ್ಗಡಿತಿ. ಭಾಗ ೩–೪ | ರೂ. ೨–೮; | ರೂ. ೧–೮ |
| ೮–೯. | ,, ,, ಭಾಗ ೫–೬ | ರೂ. ೨–೮, | ರೂ. ೧–೮ |
| ೧೦–೧೧. | ,, ,, ಭಾಗ ೭–೮ (ಕಾದಂಬರಿ) | ರೂ. ೨–೮; | ರೂ. ೧–೮ |
| ೧೨. | ನನ್ನ ದೇವರು ಮತ್ತು ಇತರ ಕಥೆಗಳು | ರೂ. ೧–೪; | ೧೨ ಆಣೆ |

# ಕಾವ್ಯಾಲಯದ ಇತರ ಪ್ರಕಟನೆಗಳು

---

| ಕೆ. ವಿ. ಪುಟ್ಟಪ್ಪನವರ— | | | ರೂ. | ಆ. | ಪೈ |
|---|---|---|---|---|---|
| ೧. ಬೊಮ್ಮನಹಳ್ಳಿಯ ಕಿಂದರಿಜೋಗಿ | .. | .. | ೦ | ೨ | ೦ |
| ೨. ಯಮನ ಸೋಲು (ನಾಟಕ) | .. | .. | ೦ | ೪ | ೦ |
| ೩. ನನ್ನ ಗೋಪಾಲ ,, | .. | .. | ೦ | ೪ | ೦ |
| ೪. ವಾಲ್ಮೀಕಿಯ ಭಾಗ್ಯ ,, | .. | .. | ೦ | ೪ | ೦ |
| ೫. ಮಹಾರಾತ್ರಿ ,, | .. | .. | ೦ | ೬ | ೦ |
| ೬. ಜಲಗಾರ ,, | .. | .. | ೦ | ೪ | ೦ |
| ೭ ಶ್ಮಶಾನ ಕುರುಕ್ಷೇತ್ರಂ ,, | .. | .. | ೦ | ೬ | ೦ |
| ೮. ಹೊಸ ಸಾಹಿತ್ಯ ಮತ್ತು ಹೊಸ ದೃಷ್ಟಿ (ಭಾಷಣ) | .. | .. | ೦ | ೧ | ೦ |

# ಕಾನೂರು ಸುಬ್ಬಮ್ಮ ಹೆಗ್ಗಡಿತಿ

**೮ ಭಾಗಗಳು ಕೆ. ವಿ. ಪುಟ್ಟಪ್ಪ ೮೦೭ ಪುಟಗಳು**

ಕಾದಂಬರಿಯನ್ನು ಓದತೊಡಗಿದೊಡನೆಯೇ ನಮ್ಮ ಕಣ್ದೆರೆಯಮೇಲೆ ಬಿಚ್ಚಿ ನಿಲ್ಲುವುದು ಎಷ್ಟು ದೊಡ್ಡ ಪ್ರದೇಶ!....ಮಲೆಸೀಮೆಯನ್ನು ಎಂದೂ ಕಾಣದವರೂ ಪುಸ್ತಕವನ್ನೋದಿದಲ್ಲಿ ಹತ್ತಾರು ವರ್ಷ ಅಲ್ಲಿ ವಾಸಮಾಡಿದವರಂತೆ ಅನುಭವವನ್ನು ಹೊಂದಬಹುದಾಗಿದೆ.

ಓದುಗರ ಚಿತ್ತಭಿತ್ತಿಯಮೇಲೆ ಸುಳಿದಾಡಿ, ಕಾರ್ಯಗಳನ್ನು ಎಸಗಿ, ತಮ್ಮ ಗುಣಸ್ವರೂಪಗಳನ್ನು ಅಚ್ಚಳಿಯದೆ ಬಿಂಬಿಸಿ ಹೋಗುವ ಪಾತ್ರಗಳು ಅದೆಷ್ಟು ಬಗೆಯವು? ಒಂದು ಕಡೆ ಪೂರ್ವಾಚಾರದ ಮೌಢ್ಯದಿಂದ, ಸಂಕುಚಿತ ಮಾನಸರಾಗಿ ಸ್ವಾರ್ಥವೇ ಸರ್ವಸ್ವವೆಂದು ಬಗೆದು....ದರ್ಪದ ದುರಭಿಮಾನ ಜೀವನವನ್ನು ನಡೆಸುವ ಚಂದ್ರಯ್ಯಗೌಡರು; ಇನ್ನೊಂದು ಕಡೆ, ನವಸಂಪ್ರದಾಯಗಳ ಸಂಪರ್ಕದಿಂದ ವಿಶಾಲಹೃದಿತನಾಗಿ, ಲೋಕಸೇವೆಯೇ ಮೂಲಸಾಧನವೆಂದು ಬಗೆದು ಇತರರಿಗಾಗಿ ಏನು ಬೇಕಾದರೂ ಮಾಡಲು ಸಿದ್ಧವಾಗಿರುವ ಹೂವಯ್ಯ; ಇವರಿಬ್ಬರಿಗೂ ಮಧ್ಯಸ್ಥನಾಗಿ, ಚಂದ್ರಯ್ಯಗೌಡರ ಸಣ್ಣ ಮನೋಭಾವದ ಸ್ಥಿತಿಯಿಂದ ತಪ್ಪಿಸಿಕೊಂಡರೂ, ಹೂವಯ್ಯನ ನಿಸ್ವಾರ್ಥ ಹೃದಯ ವೈಶಾಲ್ಯದ ಮಟ್ಟವನ್ನು ಮುಟ್ಟದೇಹೋದ ರಾಮಯ್ಯ;....ಇವರುಗಳಿಗೆ....ಸರಿಪಾತ್ರರಾದ ಸ್ತ್ರೀವ್ಯಕ್ತಿಗಳು, ನಾಗಮ್ಮ, ಸೀತೆ ಮತ್ತು ಸುಬ್ಬಮ್ಮ. ಕಾದಂಬರಿಯನ್ನು ಬರೀ ಈ ಪಾತ್ರಗಳ ಜೀವನಚರಿತ್ರೆಯೆನ್ನಿಸದೆ, ಮಲೆನಾಡಿನ ಜನಜೀವನದ ಒಟ್ಟು ಚರಿತ್ರೆಯೆಂದೆನ್ನಿಸಲು ವರ್ಧಕಗಳಾಗಿ ಅನೇಕ ಉಪಪಾತ್ರಗಳು ಸೃಷ್ಟಿಯಾಗಿವೆ. ಸೇರೆಗಾರ ರಂಗಪ್ಪಸೆಟ್ಟಿ, ಬೇಲರಬೈರ, ಅವನ ಹೆಂಡತಿ ಸೇಸಿ, ಡೊಳ್ಳುಹೊಟ್ಟೆ ಸೋಮ, ಹಳೇಪೈಕದ ತಿಮ್ಮ, ಓಬಯ್ಯ, ನಂಜ ಮೊದಲಾದ

ಆಳುಜನರೂ, ಸೀತೆಮನೆ ಸಿಂಗಪ್ಪಗೌಡರು ಮುಂತಾದ ಗೌಡಜನರೂ, ವೆಂಕಪ್ಪಜೋಯಿಸರೂ ಸ್ಪಷ್ಟವಾಗಿ ಚಿತ್ರಿತರಾಗಿ ಓದುಗರ ಮನಸ್ಸಿನಲ್ಲಿ ಚಿರಕಾಲ ನಿಲ್ಲುವರು. . . . . ಒಟ್ಟಿನಲ್ಲಿ, . . . . ಓದಿಯೋದಿ ಆನಂದವನ್ನನುಭವಿಸಬಹುದಾದ ಗ್ರಂಥವಿದು. —ಕತೆಗಾರ

ಎಲ್ಲಕ್ಕಿಂತ ಹೆಚ್ಚಿನ ಹಿರಿಮೆಯೆಂದರೆ ಇದರಲ್ಲಿ ನಿರ್ಮಾಣವಾದ ಮಲೆನಾಡಿನ ಜೀವಂತ ವಾತಾವರಣ. . . . ಅಲ್ಲಿಯ ಆ ಬಗೆಬಗೆಯ ಶಿಕಾರಿಗಳು, 'ದೆಯ್ಯ'ದ ಹುಚ್ಚು, ಕಳ್ಳಿನ ಮೋಹ, ಹಿಂಸೆಯ ಹೆಚ್ಚಳ ಮುಂತಾದ ವಿಷಯಗಳನ್ನು ತಾವು ಕಂಡು ಅನುಭವಿಸಿ ಆತ್ಮೀಕರಿಸಿ ಶ್ರೀ ಪುಟ್ಟಪ್ಪನವರು ಅತ್ಯಂತ ರಮ್ಯವಾಗಿ ಚಿತ್ರಿಸಿರುವರು. ಈ ವಿಷಯದಲ್ಲಿ ಅವರು ಮಾಡಿದ ಕಲಾನಿರ್ಮಾಣವು ಜಗತ್ತಿನ ಉಚ್ಚವಾಙ್ಮಯದ ಜೊತೆಗೆ ಧೈರ್ಯವಾಗಿ ನಿಲ್ಲಬಲ್ಲುದು ಎಂದು ನಾವು ಹೆಮ್ಮೆಯಿಂದ ಹೇಳಬಹುದು. ಅಲ್ಲದೆ ಗ್ರಂಥಕರ್ತರ ಒಟ್ಟಿನ ಬರೆವಣಿಗೆಯಲ್ಲಿಯೂ . . . . ಒಂದು ನಿರರ್ಗಳವಾದ ಶಕ್ತಿವಾಹಿನಿಯಿದೆ, ಚಿತ್ರಕಾರನ ವಿವರನಿಷ್ಠವಾದ ದೃಷ್ಟಿಯಿದೆ, ಉತ್ತಮ ಕವಿಯ ಕಲ್ಪನಾಶಕ್ತಿಯಿದೆ, ತಡೆಯಿಲ್ಲದ ಶೈಲಿಯಿದೆ. . . . . ಶ್ರೀ ಪುಟ್ಟಪ್ಪನವರು ಈ ಕಾದಂಬರಿಯನ್ನು ಬರೆದು ಕನ್ನಡಕ್ಕೆ ಮರೆಯಲಾಗದ ಕಾಣಿಕೆಯನ್ನು ನೀಡಿದ್ದಾರೆ. —ಪ್ರಬುದ್ಧ ಕರ್ಣಾಟಕ

---

## ಬರಲಿರುವ ಪ್ರಕಟನೆಗಳು

---

ಅಹಲ್ಯೆ (ಗೀತನಾಟಕ)
**ಪು. ತಿ. ನರಸಿಂಹಾಚಾರ್**, ಬಿ.ಎ.

ಕಾವ್ಯವಿಹಾರ
**ಕೆ. ವಿ. ಪುಟ್ಟಪ್ಪ**, ಎಂ.ಎ.

ನಂಬಿಯಣ್ಣನ ರಗಳೆ
ಹರಿಹರದೇವಕೃತ
**ತೀ. ನಂ. ಶ್ರೀಕಂಠಯ್ಯ**, ಎಂ.ಎ.

ಸಾಹಿತ್ಯ ಪ್ರಚಾರ
ಮತ್ತು ಇತರ ಭಾಷಣಗಳು
**ಕೆ. ವಿ. ಪುಟ್ಟಪ್ಪ**, ಎಂ.ಎ.